11.7. 17) 'ನಿಕೃಷ್ಯಮಾಣೇ ವಸನೇ ತು ಕೃಷ್ಣಾ ಸಸ್ಮಾರ ಕೃಷ್ಣಂ ಸುವಿಶೇಷತೋಽಪಿ' (ಮ.ತಾ.ನಿ. 21.347) ಇತ್ಯಾದಿವಚನಗಳು ಈ ಆಶಯವನ್ನು ಸಮರ್ಥಿಸುತ್ತವೆ.

ಬ್ರಹ್ಮವಾಯುಗಳಿಗಿಂತ ಅವರ ಪತ್ನಿಯರಾದ ಸರಸ್ವತಿ- ಭಾರತಿದೇವಿಯರು ಎಲ್ಲ ಗುಣಗಳಿಂದಲೂ ನೂರು ಪಟ್ಟು ಕಡಿಮೆ (ಶತಾವರರು) **'ಶಿವಾದಾಶಾ ತಥೈವಾಸ್ಯಾಃ ಮುಖ್ಯವಾಯುಃ ಶತೋತ್ತರಃ'** (7. 1) ಎಂಬ ಛಾಂದೋಗ್ಯ ಭಾಷ್ಯವು ಮತ್ತು

**ಬ್ರಹ್ಮವಾಯೂ ಚ ತದ್ ಭಾರ್ಯೇ ವೀಂದ್ರಶೇಷೌ ಚ ತತ್ ಸ್ತ್ರಿಯೌ।**
**ಶಿವಸ್ತದ್ದಯಿತಾ ಶಕ್ರಕಾಮೌ ತದ್ದಯಿತಾದಯಃ।**
**ಸರ್ವೇ ಸುರಾಃ ಕ್ರಮೇಣೈವ ವಿಷ್ಣೋರ್ಜ್ಞಾತಾ ಅಬಾಖ್ಯಕಾಃ।**
**ಜ್ಞಾನಾನಂದ ಬಲಾದ್ಯೇಷು ವಿಷ್ಣುಭಕ್ತೌ ಚ ಸರ್ವಶಃ।**
**ಹೀನಾಃ ಶತಗುಣೇನೈವ ಕ್ರಮೇಣಾನೇನ ತೇ ಮತಾಃ॥** *(ದ್ವಿ.ಪ್ರ. ಅ.3)*

ಐತರೇಯ ಭಾಷ್ಯವು ಬ್ರಹ್ಮವಾಯುಗಳಿಂದ ಅವರ ಪತ್ನಿಯರಿಗೆ ಎಲ್ಲಗುಣಗಳಿಂದಲೂ ಶತಾವರತ್ವವನ್ನು ಸಮರ್ಥಿಸುತ್ತವೆ. ಶ್ರೀವ್ಯಾಸತೀರ್ಥರ ಪ್ರಶಿಷ್ಯರಾದ ವಿಠಲಾಚಾರ್ಯರು, ಶ್ರೀನಿವಾಸತೀರ್ಥರು, ಶ್ರೀರಾಘವೇಂದ್ರಗುರುಸಾರ್ವಭೌಮರ ಪ್ರಶಿಷ್ಯರಾದ ಆರ್ಯಕೃಷ್ಣಾಚಾರ್ಯರು, ಶ್ರೀಯಾದವಾರ್ಯರ ಪ್ರಶಿಷ್ಯರಾದ ಪ್ರಹ್ಲಾದಕೃಷ್ಣಾಚಾರ್ಯರು, ತಾಮ್ರಪರ್ಣೀ ಆನಂದತೀರ್ಥಾಚಾರ್ಯರು, ಸ್ವಪತಿಗಳಿಗಿಂತ ಸರಸ್ವತೀಭಾರತಿಯರು ಶತಾವರರೆಂದು ಹೇಳಿದ್ದಾರೆ.

ಆದರೆ ಛಲಾರಿ ನರಸಿಂಹಾಚಾರ್ಯರು- ಶ್ರೀಸತ್ಯವ್ರತ ಸ್ವಾಮಿಗಳು- ವ್ಯಾಸಾಚಾರ್ಯ ಶಿಷ್ಯರಾದ ಕರವೀರ ಮಧ್ವಾಚಾರ್ಯರು ಮೊದಲಾದ ಜ್ಞಾನಿಗಳು ಸರಸ್ವತೀಭಾರತಿಯರು ತಮ್ಮ ಪತಿಗಳಿಗಿಂತ ಆನಂದಗುಣದಿಂದ ಶತಾಂಶಶೂನ್ಯರು, ಜ್ಞಾನದಿಂದ ಅನಂತಾಂಶಶೂನ್ಯರು ಎಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಶ್ರೀಪ್ರಹ್ಲಾದಕೃಷ್ಣಾಚಾರ್ಯರು ತಮ್ಮ ಗ್ರಂಥದಲ್ಲಿ ಈ ಬಗ್ಗೆ ಹೆಚ್ಚಿನ ವಿಮರ್ಶೆ ನಡೆಸಿದ್ದಾರೆ-

ಜ್ಞಾನವಿಷಯದಲ್ಲಿ ಸರಸ್ವತಿ- ಭಾರತಿಯರು ತಮ್ಮ ಪತಿಗಿಂತ ಅನಂತಾಂಶ ನ್ಯೂನರೆಂದು ಪ್ರತಿಪಾದಿಸುವ ಅನುವ್ಯಾಖ್ಯಾನ ವಚನವು ಹೀಗಿದೆ-

ಉಮಾ ಯಾವದನಂತಾಂಶಾನ್ ಪೂರ್ವದೃಷ್ಟೇಭ್ಯ ಏವ ತು।
ವಿಶೇಷಾನ್ ವಾಸುದೇವಸ್ಯ ಪಶ್ಚಾದುಕ್ತಾ ವಿಚಕ್ಷತೇ॥ - ಅನುವ್ಯಾಖ್ಯಾನ *3. 4. 3*

ಆದರೆ ಈ ವಚನವು ಸಾವಕಾಶವಾಗಿದೆ. ಬೃಹದ್ ಭಾಷ್ಯದ (ಅ. 3. ಬ್ರಾ. 5) ಮುಂದೆ ಉದಾಹರಿಸಲ್ಪಡುವ ವಾಕ್ಯವು ಜ್ಞಾನಾದಿಗುಣಗಳಿಂದ ಸರಸ್ವತೀ ಭಾರತಿಯರು ಸ್ವಪತಿಗಿಂತ ಶತಾವರರೆಂದು ಸ್ಫುಟವಾಗಿ ನಿರೂಪಿಸುತ್ತಿದೆ-

ಚಂದ್ರೇತ್ಯಾದಿ ಸ್ವರೂಪಾಯಾಸ್ತೇಭ್ಯಃ ಶತಗುಣಾವರಾಃ।
ವಿಷ್ಣುಭಕ್ತೌ ಚ ತತ್ಪ್ರೀತೌ ಜ್ಞಾನಾನಂದಾದಿಕೇಷ್ವಪಿ ॥

ಸರಸ್ವತೀ- ಭಾರತಿದೇವಿಯ ಜ್ಞಾನವು ತಮ್ಮ ಪತಿಗಿಂತ ಅನಂತಾಂಶನ್ಯೂನ ಮತ್ತು ಆನಂದವು ಶತಾಂಶನ್ಯೂನವೆಂಬ ವಾದದಲ್ಲಿ ಬಹುಪ್ರಮಾಣ ವಿರೋಧವಿದೆ-

'ಮುಖ್ಯಂ ಸಮಗ್ರಂ ತದ್ ಬ್ರಹ್ಮ ಜ್ಞಾನಸ್ಯಾಪಿ ಸಮಗ್ರತಃ' (ಬೃಹದ್ ಭಾಷ್ಯ 3.5) ಎಂಬ ಪ್ರಮಾಣವಚನವು ಜ್ಞಾನಪೂರ್ಣತೆಯ ಆಧಾರದಿಂದ ಆನಂದತಾರತಮ್ಯವನ್ನು ತಿಳಿಸುತ್ತಿದೆ.

ಇದರಂತೆ ಜ್ಯೋತಿರ್ಬ್ರಾಹ್ಮಣದ (ಅ.5) 'ಜ್ಞಾನಾಧಿಕ್ಯದಿಂದ ಸುಖಾಧಿಕ್ಯವನ್ನು' ಪ್ರತಿಪಾದಿಸುವ ಪ್ರಮಾಣವಚನವು ಗಮನಾರ್ಹವಾಗಿದೆ-

ಸ್ವಯೋಗ್ಯ ಭಗವದ್ ದೃಷ್ಟೇಃ ಸರ್ವೈರ್ಮುಕ್ತಿರವಾಪ್ಯತೇ।
ಪುನರ್ಜ್ಞಾನಾಂತರಾಧಿಕ್ಯಾತ್ ಸುಖಾಧಿಕ್ಯಂ ವಿಮೋಕ್ಷಣೇ ॥

ಇದರಂತೆ, ಪ್ರೀತಿಯಲ್ಲಿ ಪರ್ಯವಸಾನಗೊಂಡ ಜ್ಞಾನದ (ಭಕ್ತಿಯ) ಹೆಚ್ಚಳದಿಂದ, ಮುಕ್ತಿಯಲ್ಲಿ ಆನಂದದ ತಾರತಮ್ಯವು ವರ್ಣಿಸಲ್ಪಟ್ಟಿದೆ-

ಯಥಾ ಭಕ್ತಿವಿಶೇಷೋಽತ್ರ ದೃಶ್ಯತೇ ಪುರುಷೋತ್ತಮೇ।
ತಥಾ ಮುಕ್ತಿವಿಶೇಷೋಽಪಿ ಜ್ಞಾನಿನಾಂ ಲಿಂಗಭೇದನೇ॥ *ಅನುವ್ಯಾಖ್ಯಾನ 3.4.3*

ಇದರಂತೆ 'ಯಾವತ್ಸೇವಾ ಪರೇ ತತ್ತ್ವೇ ತಾವತ್ಸುಖವಿಶೇಷತಾ' ಮತ್ತು 'ಯುಕ್ತಂ ಚ ಸಾಧನಾಧಿಕ್ಯಾತ್ ಸುಖಾಧಿಕ್ಯಂ ಸುರಾದಿಷು' ಎಂಬ ಅನುವ್ಯಾಖ್ಯಾನ ವಚನವೂ ಸಾಧನ (ಜ್ಞಾನ) ಫಲ (ಸುಖ) ಗಳಿಗೆ ಸಮಪರಿಮಾಣವನ್ನು ಸಮರ್ಥಿಸಿದೆ.

ಆದ್ದರಿಂದ ಸರಸ್ವತೀ- ಭಾರತಿಯರ ಜ್ಞಾನಕ್ಕಿಂತ ಬ್ರಹ್ಮ- ವಾಯುಗಳ ಜ್ಞಾನವು ಅನಂತಾಂಶ ಅಧಿಕವಾದರೆ ಅವರ ಆನಂದದಲ್ಲಿ ಅನಂತಾಧಿಕ್ಯವನ್ನು ಹೇಳಬೇಕಾಗುವುದು. ಬ್ರಹ್ಮವಾಯುಗಳ ಆನಂದವು ಸ್ವಪತ್ನಿಯರಿಗಿಂತ ಶತಾಂಶ ಅಧಿಕವೆಂದು ಪ್ರಮಾಣಸಿದ್ಧವಾದಾಗ ಅದಕ್ಕೆ ಕಾರಣವಾದ ಜ್ಞಾನದಲ್ಲೂ ಶತಾಂಶ ಆಧಿಕ್ಯವನ್ನು ಒಪ್ಪುವುದು ಪ್ರಮಾಣಸಮ್ಮತವೆನಿಸುವುದು.

ಈ ಹಿನ್ನೆಲೆಯಲ್ಲಿ ಅನುವ್ಯಾಖ್ಯಾನಕ್ಕೂ ಶತಾಂಶನ್ಯೂನತ್ವವೇ ಸಮ್ಮತ. ಮುಕ್ತಿಯಲ್ಲಿ ಪ್ರಾಣನ ಜ್ಞಾನಾದಿಗುಣಗಳು ಅತಿಸ್ಫುಟವೆಂಬ ದೃಷ್ಟಿಯಿಂದ ಅನಂತಗುಣ ವ್ಯತ್ಯಾಸವನ್ನು ಉಪವರ್ಣಿಸಲಾಗಿದೆ. ಅನುವ್ಯಾಖ್ಯಾನದಲ್ಲಿ ಹೇಳಿದ ಜ್ಞಾನಪದದಿಂದ ಉಪಲಕ್ಷಣಯಾ (ಅಜಹಲ್ಲಕ್ಷಣಯಾ) ಇತರ ಗುಣಗಳನ್ನು ತೆಗೆದುಕೊಳ್ಳಬೇಕು. ಹೀಗೆ ವ್ಯಾಖ್ಯಾನಿಸದಿರುವಲ್ಲಿ, ಎಲ್ಲ ಗುಣಗಳಲ್ಲೂ ಉತ್ತಮದೇವತೆಗಳಲ್ಲಿ ಸ್ಫುಟತೆಯನ್ನು ಸಾರುವ ತೈತ್ತಿರೀಯ ಭಾಷ್ಯವಿರೋಧವು ಅಪರಿಹಾರ್ಯವಾದೀತು -

ಯಥಾನಂದೇ ತಥಾಜ್ಞಾನೇ ವಿಷ್ಣುಭಕ್ತೌ ಬಲಾದಿಕೇ ।
ಉತ್ತರೇಷಾಂ ಉತ್ತರೇಷಾಂ ಗುಣಾ ಏವಮತಿಸ್ಫುಟಾಃ ।

ಆದ್ದರಿಂದ ಸರಸ್ವತೀ- ಭಾರತಿಯರು ಸ್ವಪತಿಗಳಿಗಿಂತ ಶತಾಂಶನ್ಯೂನರೆಂದೇ ತಿಳಿಯಬೇಕು.

ಇಲ್ಲಿ ಇನ್ನೊಂದು ವಿಷಯವನ್ನು ಸ್ಪಷ್ಟವಾಗಿ ತಿಳಿಯಬೇಕು. ಕರ್ಮಜದೇವತೆಗಳಿಗಿಂತ ತತ್ತ್ವಾಭಿಮಾನಿಗಳು ಶ್ರೇಷ್ಠರು. ಅವರಿಗಿಂತ ದಕ್ಷನು ಶ್ರೇಷ್ಠನು.

.................. ಸರ್ವೇ ತ್ವೇತೇ ದಶೋತ್ತರಾಃ ।
ಪರ್ಜನ್ಯಮಿತ್ರಶಿಖಿನೋ ಭೂತವಾಯುಸ್ತಥೈವ ಚ।
ದ್ವಿಗುಣಾ ಏವಾನಿರುದ್ಧೋಽನಿಲಾತ್ಪಂಚಗುಣಾಧಿಕಃ ।
ಪಾದೋನೋ ವರುಣಾದಗ್ನಿರಧ್ಯರ್ಧೋಽನಃ ಸ ಸೋಮತಃ ।
ಶಿವಾದಾಶಾ ತಥೈವಾಸ್ಯಾಃ ಮುಖ್ಯವಾಯುಃ ಶತೋತ್ತರಃ ।

*- ಛಾಂದೋಗ್ಯ ಭಾಷ್ಯೋದಾಹೃತ- 7. 1. 15 ತತ್ತ್ವವಿವೇಕ ವಚನ*

ಇತ್ಯಾದಿ ಛಾಂದೋಗ್ಯಭಾಷ್ಯಕ್ಕೆ ಅನುಗುಣವಾಗಿ ಮಿತ್ರ- ಪರ್ಜನ್ಯರ ನಡುವೆ ಇರುವ ಬಲಿಚಕ್ರವರ್ತಿಯೇ ಮೊದಲಾದ ಕರ್ಮಜದೇವತೆಗಳಿಗಿಂತ ಮಿತ್ರನು ಕಿಂಚಿತ್ ಅಧಿಕನು. ಅವನಿಗಿಂತ ಅಗ್ನಿ ದ್ವಿಗುಣಾಧಿಕನು. ಅವನಿಗಿಂತ ಅನಿರುದ್ಧ ಮತ್ತು ಸಮಾನಕಕ್ಷರಾದ ದಕ್ಷಾದಿಗಳು ಪಂಚಗುಣಾಧಿಕರು. ಅನಿರುದ್ಧಾದಿಗಳಿಗಿಂತ ಇಂದ್ರ- ಕಾಮರು ದಶಗುಣೋಚ್ಚರು. ಇವರಿಗಿಂತ ದಶಗುಣಾಧಿಕಳು ಉಮೆ. ಇವಳಿಗಿಂತ ಇವಳ ಪತಿಯಾದ ಶಂಕರ ದಶಗುಣಾಧಿಕನು. ಇಲ್ಲಿಂದ ಮುಂದೆ ಭಾರತೀ ಪ್ರಾಣರಲ್ಲಿ ಶತಗುಣಾಧಿಕ್ಯವು ವಿವಕ್ಷಿತವಾಗಿದೆ.

ಕರ್ಮಜದೇವತೆಗಳು- ತಾತ್ತ್ವಿಕದೇವತೆಗಳು ಮತ್ತು ದಕ್ಷಾದಿಗಳಲ್ಲಿ ತೈತ್ತಿರೀಯಕ್ಕೆ ಅನುಗುಣವಾಗಿ (ಆಪಾತತಃ ತೋರಿದಂತೆ) ಶತಗುಣ ತಾರತಮ್ಯವನ್ನು ಹೇಳಿದರೆ ನಿರವಕಾಶ ಛಾಂದೋಗ್ಯಭಾಷ್ಯ ವಿರೋಧವು ಅಪರಿಹಾರ್ಯವಾಗುವುದು. ಆದ್ದರಿಂದ ತೈತ್ತಿರೀಯಶ್ರುತಿಯಲ್ಲಿ, 'ಶಕ್ರಶ್ಚೋಮಾ ಚ ರುದ್ರಶ್ಚ' ಎಂಬುದಾಗಿ ಐತರೇಯ ದ್ವಿತೀಯ ಪ್ರಘಟ್ಟಕದಲ್ಲಿ, 'ಉಮಾದಿಭ್ಯಃ ಪ್ರಬುದ್ಧೇಭ್ಯಃ ಶತಾಂಶಾನೇವ ಚಕ್ಷತೇ' ಎಂಬ ಅನುವ್ಯಾಖ್ಯಾನದಲ್ಲಿ (3-4-88) ದಕ್ಷನಿಂದ ಉಮೆಯತನಕ ಶತಾಂಶ ತಾರತಮ್ಯ ಶ್ರುತವಾದರೂ ಅದು ಸ್ಪಷ್ಟತ್ವಾಭಿಪ್ರಾಯದಿಂದಲೇ ಪ್ರವೃತ್ತವಾಗಿದೆ ಎಂದು ತಿಳಿಯಬೇಕು. ಇದೇ ಅಭಿಪ್ರಾಯವನ್ನೇ ಸಹಸ್ರಗುಣ ತಾರತಮ್ಯ ಬೋಧಕ ವಾಕ್ಯಗಳಿಗೂ ವರ್ಣಿಸಬೇಕು.

**ಜೀವನಲ್ಲಿ ಪರಿಮಾಣಾಧಿಕ್ಯವಿದೆಯೆ?**

ಈ ಪ್ರಸಂಗದಲ್ಲಿ ಪ್ರಹ್ಲಾದ ಕೃಷ್ಣಾಚಾರ್ಯರು ಇನ್ನೊಂದು ಸೂಕ್ಷ್ಮ ಪ್ರಮೇಯವನ್ನು

ನಿರೂಪಿಸಿದ್ದಾರೆ- 'ಉತ್ಕ್ರಾಂತಿಗತ್ಯಾಗತೀನಾಮ್' (2.3.20) ಎಂಬ ಬ್ರಹ್ಮಸೂತ್ರದಲ್ಲಿ ಜೀವನಿಗೆ ಅಣುತ್ವವು ಪ್ರತಿಪಾದಿಸಲ್ಪಟ್ಟದೆ. ಇದು ಬ್ರಹ್ಮಾದಿಗಳಿಗೂ ಅನ್ವಯಿಸುತ್ತದೆ. ಇಂತಹ ಬ್ರಹ್ಮಾದಿದೇವತೆಗಳ ಸ್ವಭಾವವಾದ ಜ್ಞಾನಾನಂದಾದಿಗಳಲ್ಲಿ ಹಿಂದಿನವರಿಗಿಂತ ಹೆಚ್ಚಳವನ್ನು ಒಪ್ಪಿದಾಗ ಜೀವಸ್ವರೂಪದಲ್ಲಿ ಪರಿಮಾಣಾಧಿಕ್ಯವು ಅಪರಿಹಾರ್ಯವಾಗಲಾರದೆ?

ಈ ಶಂಕೆಗೆ ಸಮಾಧಾನ ಹೀಗಿದೆ-

ಎಲ್ಲ ಜೀವರಲ್ಲಿ ಅಣುಪರಿಮಾಣವನ್ನು ಒಪ್ಪಿ ಗುಣಗಳಲ್ಲಿ ಆಧಿಕ್ಯವನ್ನು ಒಪ್ಪಿದರೂ, ಪರಿಮಾಣಾಧಿಕ್ಯ ಪ್ರಸಕ್ತಿ ಇರುವುದಿಲ್ಲ. ಸಮಪರಿಮಾಣವಿರುವ ಅಗ್ನಿಜ್ವಾಲೆ ಮತ್ತು ದೀಪಗಳಲ್ಲಿ ಸ್ಫುಟತಾಧಿಕ್ಯವು ದೀಪದಲ್ಲಿ ಹೆಚ್ಚಿರುವುದು ಕಂಡಿದೆ. ಇನ್ನೊಂದಂಶವನ್ನು ಗಮನಿಸಬೇಕು- ಪರಿಮಾಣಾಧಿಕ್ಯವುಳ್ಳ ಅಗ್ನಿಜ್ವಾಲೆಗಿಂತ ಅಲ್ಪ ಪರಿಮಾಣವುಳ್ಳ ದೀಪದಲ್ಲಿ ಪ್ರಕಾಶಾಧಿಕ್ಯ (ಸ್ಫುಟತಾ) ಅನುಭವ ಸಿದ್ಧವಾಗಿದೆ.

ಈ ಹಿನ್ನೆಲೆಯಲ್ಲಿ ಜೀವಸ್ವರೂಪವು ಅಣುವಾಗಿದ್ದರೂ ಆನಂದಾದಿಗುಣಗಳ ಅನುಭೂತಿಯಲ್ಲಿ ಸ್ಫುಟತಾಧಿಕ್ಯವು ಯುಕ್ತವಾಗಿದೆ. ಇದು ಪ್ರಮಾಣ ಸಿದ್ಧವಾದ ಕಾರಣ ಅಂಗೀಕಾರಾರ್ಹವಾಗಿದೆ.

ಇದಲ್ಲದೆ, ಶ್ರೀಹರಿಯ ಅಚಿಂತ್ಯ ಶಕ್ತಿಯಿಂದ ಮುಕ್ತಿಯಲ್ಲಿ, ಜೀವಸ್ವರೂಪದಲ್ಲಿ ಪರಿಮಾಣಾಧಿಕ್ಯವೂ ಸಿದ್ಧಾಂತದಲ್ಲಿ ಅಂಗೀಕೃತವಾಗಿದೆ-

ಅಲ್ಪತೇಜಸ್ತಥೈವಾಲ್ಪಂ ಜೀವರೂಪಂ ಹಿ ಸಂಸೃತೌ।
ತದೇವ ಸುಮಹತ್ತೇಜಃ ಕರೋತಿ ಭಗವಾನ್ ಮಹತ್ ॥ - ಬೃಹದ್‌ಭಾಷ್ಯ. ಅ. 6. ಪು. 722

ಜೀವಸ್ವರೂಪದಲ್ಲಿ ಪರಿಮಾಣಾಧಿಕ್ಯವನ್ನು ಒಪ್ಪಿದಾಗ ವಿಕಾರವನ್ನು ಒಪ್ಪಿದಂತಾಗಿ ಜೀವರಿಗೆ ಅನಿತ್ಯತ್ವ ಬರಲಾರದೆ? ಎಂಬ ಶಂಕೆ ಸಹಜ. ಆದರೆ ಗೀತಾಭಾಷ್ಯ ಪ್ರಮೇಯದೀಪಿಕೆಯಲ್ಲಿ ವಿಕಾರಿತ್ವವಿದ್ದರೂ ಅಚಿಂತ್ಯವಾದ ಈಶಶಕ್ತಿಯಿಂದ ಅನಿತ್ಯತ್ವಬಾರದೆಂದು ಸಮಾಧಾನಿಸಿದ್ದಾರೆ. ಜೀವನ್ಮುಕ್ತ್ಯವಸ್ಥೆಯಲ್ಲಿಯೇ ಅಣಿಮಾದಿ ಯೋಗಸಿದ್ಧರ ಸ್ವರೂಪದಲ್ಲಿ ಪರಿಮಾಣಾಧಿಕ್ಯವನ್ನು ಶಾಸ್ತ್ರವು ಒಪ್ಪಿರುವಾಗ ಮುಕ್ತರಲ್ಲಿ ಪರಿಮಾಣಾಧಿಕ್ಯವು ನಿರಾಕರಣಾರ್ಹವಲ್ಲ. ಆದ್ದರಿಂದ ಬ್ರಹ್ಮಾದಿ ದೇವತೆಗಳ ಸ್ವರೂಪವು (ಜೀವಸ್ವರೂಪ) ಅಣುವಾಗಿದ್ದರೂ ಆಧಿಕ್ಯವನ್ನು ಹೇಳುವ ವಚನಗಳಿಗೆ ಸ್ಫುಟತೆಯ ಪ್ರತಿಪಾದನೆಯಲ್ಲಿ ತಾತ್ಪರ್ಯವಿದೆಯೆಂದು ಮತ್ತು ಮುಕ್ತಿಯಲ್ಲಿ ಪರಿಮಾಣಾಧಿಕ್ಯವನ್ನು ಹೇಳಬಹುದು.

## ಕಕ್ಷ್ಯ-5

ಗರುಡ-ಶೇಷ-ರುದ್ರರು ಐದನೆಯ ಕಕ್ಷ್ಯೆಗೆ ಸೇರಿದ ದೇವತೆಗಳು. ಈ ಮೂವರು ದೇವತೆಗಳು ಸರಸ್ವತಿ-ಭಾರತೀದೇವಿಗಿಂತ ಶತಾವರರು.

ಈ ಮೂವರಲ್ಲಿ ಗರುಡನಿಗೆ ಅವತಾರವಿಲ್ಲ. ಶೇಷದೇವರು, ಪರಮಾತ್ಮನ ಮತ್ತು ಮುಖ್ಯಪ್ರಾಣನ ಆವೇಶಯುಕ್ತರಾಗಿ 'ನರ' ಎನಿಸಿದ್ದಾರೆ. ಇದಲ್ಲದೆ 'ಶುಕ್ಲಕೇಶ' ಎಂಬ ಭಗವಂತನ ಆವೇಶವುಳ್ಳ ರೂಪ 'ಬಲರಾಮ' ಎನಿಸಿದೆ. ಸಂಕರ್ಷಣಾವೇಶವುಳ್ಳ ಶೇಷನ ಅವತಾರವೇ ಲಕ್ಷ್ಮಣ.

ರುದ್ರದೇವರು ವಾಯುದೇವರ ಆವೇಶದಿಂದ 'ಶುಕ'ರೆಂಬ ನಾಮಧೇಯರಾಗಿ ಅವತರಿಸಿದರು. ಲವಣಸಾಗರದಲ್ಲಿ ತಪಸ್ಸು ಮಾಡಿದಕಾರಣ 'ತಪ' ಎನಿಸಿದ್ದಾರೆ. ರುದ್ರದೇವರ ಇತರ ಅವತಾರಗಳು ಅಶ್ವತ್ಥಾಮ- ಔರ್ವ- ದೂರ್ವಾಸ ಮೊದಲಾದವುಗಳು.

## ಕಕ್ಷ್ಯ - 6

ಶ್ರೀಕೃಷ್ಣನ ಮಡದಿಯರಾದ ಜಾಂಬವತೀ-ನೀಲಾ-ಮಿತ್ರಾ-ಲಕ್ಷಣಾ-ಕಾಲಿಂದೀ-ಭದ್ರಾ- ಆರುಮಂದಿ ಗರುಡಾದಿಗಳಿಗಿಂತ ಪಂಚಗುಣನ್ಯೂನರು. ಈ ಆರು ಸ್ತ್ರೀಯರಲ್ಲಿ ಜಾಂಬವತಿಯು ಶ್ರೇಷ್ಠಳೆನಿಸಿದ್ದಾಳೆ. 'ತಾಸಾಂ ಮಧ್ಯೆ ಜಾಂಬವತೀ ಪ್ರಧಾನಾ' (ಮ.ತಾ.ನಿ.20.61) ಈ ಶ್ರೇಷ್ಠತೆಯು ವಿಶೇಷಾವೇಶ ಮೂಲಕವಲ್ಲ. ರಮೆಯ ವಿಶೇಷಾವೇಶವಿರುವಾಗ ಜಾಂಬವತಿಯು ಬಲರಾಮನಿಗೆ ಸಮಳಾಗುವಳೆಂದು ಮುಂದೆ ವರ್ಣಿಸಲಾಗಿದೆ-

ರಾಮೇಣ ತುಲ್ಯಾ ಜಾಂಬವತೀಪ್ರಿಯತ್ವೇ ।
ಕೃಷ್ಣಸ್ಯಾನ್ಯಾಃ ಕಿಂಚಿದೂನಾಶ್ಚ ತಸ್ಯಾಃ
ಯದಾವೇಶೋ ಬಹುಲಃ ಸ್ಯಾದ್ ರಮಾಯಾಃ — ಮ.ತಾ.ನಿ. *20.61*

ಈ ಹಿನ್ನೆಲೆಯಲ್ಲಿ ಜಾಂಬುವತಿಯು ಆರು ವಿಷ್ಣುಪತ್ನಿಯರಲ್ಲಿ ಸ್ವಭಾವತಃ ಶ್ರೇಷ್ಠಳೆನಿಸುವಳು.

ಜಾಂಬವತಿ ಜಾಂಬವಂತನ ಮಗಳು. ನೀಲಾದೇವಿಯು ಕವ್ಯವಾಹನ ನಾಮಕ ಅಗ್ನಿಯ ಮಗಳುಮತ್ತು ಕುಂಭಕನ ಮಗಳಾಗಿ ಜನ್ಮವೆತ್ತಿದ್ದಾಳೆ. ಭದ್ರಾದೇವಿಯು ಕೇಕಯರಾಜ ನಲನ ಮಗಳಾಗಿ ಮತ್ತು ಧೃಷ್ಟಕೇತುವಿನ ಮಗಳಾಗಿ ಜನಿಸಿದ್ದಾಳೆ. ಮಿತ್ರವಿಂದಾದೇವಿಯು ಅಗ್ನಿಷ್ವಾತ್ತನೆಂಬ ಪಿತೃವಿನ ಮಗಳು ಮತ್ತು ಜಯತ್ಸೇನನ ಕುವರಿಯಾಗಿ ಹುಟ್ಟಿದ್ದಾಳೆ. ಕಾಲಿಂದಿಯು ವಿವಸ್ವಾನ್ ನಾಮಕ ಸೂರ್ಯನ ಮಗಳು. ಲಕ್ಷಣಾದೇವಿಯು ಬೃಹತ್ಸೇನ ರಾಜನ ಮಗಳು. ಮತ್ತು ಮದ್ರರಾಜನ ಪುತ್ರಿಯಾಗಿ ಜನಿಸಿದ್ದಾಳೆ.

ಶ್ರೀಕೃಷ್ಣನ ಷಣ್ ಮಹಿಷಿಯರು ಗರುಡಾದಿಗಳಿಂದ ಐದು ಪಟ್ಟು ಕಡಿಮೆ. ಗರುಡ ಶೇಷ ರುದ್ರರು ತಮ್ಮ ಪತ್ನಿಯರಿಗಿಂತ ದಶಗುಣಾಧಿಕರು. 'ಸರ್ವೇ ಏತೇ ದಶೋತ್ತರಾಃ' ಎಂಬ ಛಾಂದೋಗ್ಯಭಾಷ್ಯವು ಇದನ್ನು ಸಾರಿದೆ.

**ಷಣ್ಮಹಿಷಿಯರಿಗಿಂತ ಸೌಪರ್ಣ್ಯಾದಿಗಳು ದ್ವಿಗುಣನ್ಯೂನರು.**

ಷಣ್ಮಹಿಷಿಯರಲ್ಲಿ ರಮೆಯ ಆವೇಶವು ಕಡಿಮೆಯಾದಾಗ ಅವರು ಪ್ರದ್ಯುಮ್ನನಿಗಿಂತ ಇಪ್ಪತ್ತು ಪಟ್ಟು ಅಧಿಕರಾಗಿರುತ್ತಾರೆಂದು ತಾತ್ಪರ್ಯನಿರ್ಣಯದಲ್ಲಿ ನಿರೂಪಿಸಲಾಗಿದೆ-

ಯದಾವೇಶೋ ಹ್ರಾಸಮುಪೈತಿ ತತ್ರ
ಪ್ರದ್ಯುಮ್ನತೋ ವಿಂಶಗುಣಾಧಿಕಾಃ ಸ್ಯುಃ। -ಮ.ತಾ.ನಿ. *20.62*

ಕಾಮನಿಗಿಂತ ಸೌಪರ್ಣೀ ಮೊದಲಾದವರು ದಶಗುಣೋಚ್ಚರು. ಅವರಿಗಿಂತ ಷಣ್ಮಹಿಷಿಯರು ಎರಡು ಪಟ್ಟು ಅಧಿಕರಾದಾಗ ಮಾತ್ರ ಪ್ರದ್ಯಮ್ನನಿಗಿಂತ ಇಪ್ಪತ್ತು ಗುಣ ಅಧಿಕರೆಂಬುವುದು ಉಪಪನ್ನವಾಗುತ್ತದೆ. ಈ ಷಣ್ಮಹಿಷಿಯರಿಗಿಂತ ಗರುಡಾದಿಗಳು ಪಂಚಗುಣಾಧಿಕರು. ಆದ್ದರಿಂದ ಸುಪರ್ಣೀ ಮೊದಲಾದವರಿಗಿಂತ ಗರುಡಾದಿಗಳು ಹತ್ತು ಪಟ್ಟು ಅಧಿಕರೆಂಬುವುದು ಸಮಂಜಸವೆನಿಸುವುದು.

### ಕಕ್ಷ್ಯಾ - 7

ಗರುಡದೇವನ ಪತ್ನಿಯಾದ ಸುಪರ್ಣಿ ಶೇಷಪತ್ನಿಯಾದ ವಾರುಣೀ-ಶಂಕರನ ಪತ್ನಿಯಾದ ಉಮೆ ಷಣ್‌ಮಹಿಷಿಯರಿಗಿಂತ ದ್ವಿಗುಣನ್ಯೂನರು. ತಮ್ಮ ಪತಿಗಿಂತ ದಶಗುಣಾಧಮರು, 'ಸರ್ವೇ ತ್ವೇತೇ ದಶೋತ್ತರಾಃ' ಎಂಬ ಛಾಂದೋಗ್ಯಭಾಷ್ಯವೇ ಈ ಬಗ್ಗೆ ಪ್ರಮಾಣವೆನಿಸಿದೆ. ಐತರೇಯ ಭಾಷ್ಯದಲ್ಲಿ ಉಮಾ-ರುದ್ರರ ನಡುವೆ ಶತಗುಣ ತಾರತಮ್ಯ ಉಕ್ತವಾಗಿದ್ದರೂ ಅಲ್ಲಿನ ಶತಶಬ್ದವು ಬಹುತ್ವಮಾತ್ರಾರ್ಥಕವೆಂದು ಸ್ಪಷ್ಟತಾಧಿಕ್ಯವನ್ನು ಹೇಳುವ ಅಭಿಪ್ರಾಯ ವಿದೆಯೆಂದೂ ತಿಳಿಯಬೇಕು. ನಿರವಕಾಶ ಛಾಂದೋಗ್ಯಭಾಷ್ಯವೇ ಇದಕ್ಕೆ ಕಾರಣವೆಂದು ಹಿಂದೆ ನಿರೂಪಿಸಲಾಗಿದೆ. ಗರುಡಪತ್ನಿಯಾದ ಸುಪರ್ಣಿಗೆ ಅವತಾರವಿಲ್ಲ. ವಾರುಣೀದೇವಿಯು ರೇವತರಾಜನ ಮಗಳಾಗಿ 'ರೇವತಿ' ಎಂದೂ ಶ್ರೀದೇವಿಯ ಸನ್ನಿಧಾನಪಾತ್ರಳಾಗಿ 'ಶ್ರೀ' ಎಂದೂ, 'ಪೇಯ'ಕ್ಕೆ ಅಭಿಮಾನಿನಿಯಾಗಿ 'ಪೇಯಾ' ಎನಿಸಿದ್ದಾಳೆ. ಉಮೆಯು ಹಿಮವಂತನ ಪುತ್ರಿಯಾಗಿ ಪಾರ್ವತಿ ಎನಿಸಿದ್ದಾಳೆ.

### ಕಕ್ಷ್ಯಾ - 8

ಇಂದ್ರ-ಕಾಮರು ಸುಪರ್ಣಿದೇವಿಮೊದಲಾದವರಿಗಿಂತ ದಶಗುಣಾವರರು. ಕಾಮನು ಇಂದ್ರನಿಗಿಂತ ಕಡಿಮೆಯೋಗ್ಯತೆಯುಳ್ಳವನು. 'ಪ್ರಾಯ ಇಂದ್ರವತ್ ಕಾಮಃ' ಎಂಬ ಅನುವ್ಯಾಖ್ಯಾನ ವಚನವೇ ಈ ಬಗ್ಗೆ ಪ್ರಮಾಣವೆನಿಸಿದೆ. ಇಂದ್ರನಲ್ಲಿ ಹರಿ-ವಾಯು-ಶೇಷದೇವರ ಆವೇಶವಿದೆ. ಅರ್ಜುನನಾಗಿ ಇಂದ್ರನು ಅವತರಿಸಿದಾಗ ಹರಿ-ವಾಯು-ಶೇಷ-ಇಂದ್ರರ ಆವೇಶ ಇರುತ್ತದೆ- 'ಸೇಂದ್ರೈಶ್ಚತುರ್ಭಿಃ ಪಾರ್ಥಸ್ತು' (ಭಾಗ.ತಾ. 11.)

ಇಂದ್ರನ ಅವತಾರಗಳು ಹೀಗಿವೆ-

| | | | |
|---|---|---|---|
| 1. | ಅರ್ಜುನ | - | ಪಾಂಡುರಾಜನ ಪುತ್ರ |
| 2. | ಪುರಂದರ | - | ಏಳನೇ ಮನ್ವಂತರದ ಇಂದ್ರ |
| 3. | ಗಾಧಿ | - | ವಿಶ್ವಾಮಿತ್ರನ ತಂದೆ |
| 4. | ಕುಶ | - | ಶ್ರೀರಾಮಚಂದ್ರನ ಮಗ |
| 5. | ಮಂದ್ರದ್ಯುಮ್ನ | - | ಆರನೇ ಹಾಗೂ ಏಳನೇ ಮನ್ವಂತರದ ಇಂದ್ರ |
| 6. | ವಿಕುಕ್ಷಿ | - | ಇಕ್ಷ್ವಾಕುವಿನ ಮಗ |
| 7. | ವಾಲಿ | - | ಸುಗ್ರಿವನ ಅಗ್ರಜ |

ಕಾಮನ ಅವತಾರಗಳು-

| | | | |
|---|---|---|---|
| 1. | ಭರತ | - | ಶ್ರೀರಾಮನ ತಮ್ಮ |
| 2. | ಸಾಂಬ | - | ಜಾಂಬವತಿಯ ಮಗ |
| 3. | ಸುದರ್ಶನ | - | ಶ್ರೀಹರಿಯ ಚಕ್ರಾಭಿಮಾನಿರೂಪ |
| 4. | ಪ್ರದ್ಯುಮ್ನ | - | ರುಕ್ಮಿಣೀದೇವಿಯ ಕುಮಾರ |
| 5. | ಸನತ್ಕುಮಾರ | - | ಬ್ರಹ್ಮದೇವರ ಮಾನಸ ಪುತ್ರ |
| 6. | ಗುಹ(ಷಣ್ಮುಖ) | - | ಗೌರೀ-ಶಂಕರಕುಮಾರ |

ಬೃಹದಾರಣ್ಯಕ ಭಾಷ್ಯದಲ್ಲಿ ( 3.5) ಈ ವಿಷಯವು ಸ್ಪಷ್ಟವಾಗಿದೆ -

'ವಾಲೀ ಗಾಧೀ ವಿಕುಕ್ಷಿಶ್ಚ ಪಾರ್ಥ ಇಂದ್ರಃ ಪುರಂದರಃ ।
ಸುದರ್ಶನಶ್ಚ ಭರತಃ ಪ್ರದ್ಯುಮ್ನಃ ಸ್ಕಂದ ಏವ ಚ ।
ಸನತ್ಕುಮಾರಃ ಕಾಮಶ್ಚ ಇತ್ಯೇಕ ಏವ ವ್ಯವಸ್ಥಿತಃ ।'

## ಕಕ್ಷ್ಯಾ-9

ಗುರು ( ಬೃಹಸ್ಪತಿ) ಇಂದ್ರರ ನಡುವೆ ಇರುವ ಆಹಂಕಾರಿಕಪ್ರಾಣನು ( ತೈಜಸಾಹಂಕಾರದಿಂದ ಜನಿಸಿದವನು) ಇಂದ್ರನಿಗಿಂತ ಹತ್ತು ಗುಣ ಕಡಿಮೆ. ಇವನು ಇಂದ್ರನಿಗಿಂತ ಅವರನೆಂಬ ವಿಷಯದಲ್ಲಿ, 'ಪ್ರಾಣ ಆಹಂಕಾರಿಕ ಏವ ಚ। ಇಂದ್ರಾದನಂತರಃ' ಎಂಬ ಅನುವ್ಯಾಖ್ಯಾನವೇ ಪ್ರಮಾಣವಾಗಿದೆ. ಅನ್ನದೇವೋಽನಿರುದ್ಧಕಃ । ಅನ್ನನಾಮಾಽನುನಾದಿತ್ವಾತ್ ತೈಜಸಾಹಂಭವಸ್ತತಃ' ಎಂಬುದಾಗಿ ಅನಿರುದ್ಧನಿಗಿಂತ ಉತ್ತಮತ್ವವನ್ನು ನಿರೂಪಿಸಿ, 'ಸರ್ವೇ ತ್ವೇತೇ ದಶೋತ್ತರಾಃ' ಎಂದು ಛಾಂದೋಗ್ಯಭಾಷ್ಯವಿರುವುದರಿಂದ ಇಂದ್ರನಿಗಿಂತ ಆಹಂಕಾರಿಕಪ್ರಾಣನು ದಶಾವರನೆಂದು ತಿಳಿಯಬೇಕು. ಇವನಿಗೆ 'ನಾಸಿಕ್ಯವಾಯು' ಎಂಬ ನಾಮಧೇಯವಿದೆ- 'ತಥೈವ ನಾಸಿಕಾತೋಽಭೂತ್ ಮುಖ್ಯವಾಯೋಃ ಸುತೋ ಮರುತ್ । ಪ್ರಾಣೋ ವಾಯುರಿತಿ ದ್ವೇಧಾ' ಎಂಬ ಐತರೇಯಭಾಷ್ಯವಚನ ಮತ್ತು 'ನಾಸಿಕ್ಯಂ

ಪ್ರಾಣಮುದ್ಗೀಥಮುಪಾಸಾಂಚಕ್ರಿರೇ' ಎಂಬ ಛಾಂದೋಗ್ಯೋಪನಿಷತ್ತಿನ ವಚನವು, 'ನಾಸಾದ್ವಾರಾ ಬಹಿರ್ಯಾತಿ ಪ್ರಾಣೋಽಹಂಕಾರನಾಮವಾನ್' ಎಂಬ ವರಾಹಪುರಾಣ ವಚನಗಳು ಆಹಂಕಾರಿಕ ಪ್ರಾಣನಿಗೇ ನಾಸಿಕ್ಯವಾಯು ಎಂಬುದಾಗಿ ಕರೆಯುವರೆಂದು ಸ್ಪಷ್ಟಪಡಿಸುತ್ತವೆ. ಸರ್ವೋತ್ತುಂಗ - ಗಜ ಇವನ ಅವತಾರರೂಪಗಳು.

## ಕಕ್ಷ್ಯ - 10

ಆಹಂಕಾರಿಕ ಪ್ರಾಣನಿಗಿಂತ, ಅನಿರುದ್ಧ- ರತಿ- ಸ್ವಾಯಂಭುವ ಮನು- ಗುರು- ದಕ್ಷ- ಶಚೀ ಎಂಬುದಾಗಿ ಆರುಮಂದಿ ದಶಗುಣಾಧಮರು. ಇಲ್ಲಿ ಮಗನಾದ ಅನಿರುದ್ಧ ಮತ್ತು ತಾಯಿಯಾದ ರತಿಯನ್ನು ಒಂದೇ ಕಕ್ಷೆಯಲ್ಲಿ ನಿರೂಪಿಸಿದ್ದಾರೆ. ಈರ್ವರೂ ಸಮಕಕ್ಷ್ಯರಾದರೂ ರತಿಯು ಅನಿರುದ್ಧನಿಗೆ ಆಶ್ರಯವೆನಿಸುವಳು. ಪ್ರಮಾಣಸಿದ್ಧ ವಾದುದರಿಂದಲೇ ಈ ಸಂಗತಿ ಅಂಗೀಕಾರಾರ್ಹವಾಗಿದೆ-

'ಯಜ್ಞನಾಮಾಽನಿರುದ್ಧಕಃ । ದಕ್ಷಿಣಾಮಾನಿನೀ ದೇವೀ ರತಿರೇವ ತದಾಶ್ರಯಾ'। ತಾಯಿಯೂ ಆಶ್ರಯಳೂ ಆದುದರಿಂದ ರತಿಗೆ ಕಿಂಚಿದಾಧಿಕ್ಯವನ್ನು ಅಂಗೀಕರಿಸಬೇಕು. ಇವರಲ್ಲಿ ಅನಿರುದ್ಧನು ಅನಿರುದ್ಧನೆಂಬ ಪರಮಾತ್ಮನರೂಪದ ಆವೇಶವುಳ್ಳನಾಗಿ ಶತ್ರುಘ್ನನಾಗಿ ಜನಿಸಿರುವನು. ಇದರಂತೆ ಶ್ರೀಕೃಷ್ಣನ ಪೌತ್ರ (ಪ್ರದ್ಯುಮ್ನನ ಮಗ)ನಾಗಿ ಅನಿರುದ್ಧನು, ಜನಿಸಿರುವನು. ಬೃಹಸ್ಪತ್ಯಾಚಾರ್ಯರು ತಾರನೆಂಬ ಕಪಿಯಾಗಿ ಮತ್ತೆ ಬ್ರಹ್ಮದೇವರ ಆವೇಶ ಯುಕ್ತರಾಗಿ 'ದ್ರೋಣ' ರೆಂದು, ವಾಯುದೇವರ ಆವೇಶವುಳ್ಳವರಾಗಿ 'ಉದ್ಧವ' ನೆಂದೂ ಅವತರಿಸಿದ್ದಾರೆ. ರತಿಯು ರುಗ್ಮಿಯ ಮಗಳಾಗಿ (ಪ್ರದ್ಯುಮ್ನಪತ್ನಿ) 'ರುಗ್ಮವತೀ' ಎಂಬ ಹೆಸರಿನಿಂದ ಮತ್ತು ದುರ್ಯೋಧನನ ಮಗಳಾಗಿ 'ಲಕ್ಷಣಾ' ಎಂಬುದಾಗಿ ಅವತರಿಸಿದ್ದಾಳೆ.

ಶಚೀದೇವಿಯು ತಾರಾ (ವಾಲಿಪತ್ನಿ) ಚಿತ್ರಾಂಗದೆ (ಅರ್ಜುನನ ಪತ್ನಿ) ಯಾಗಿ ಅವತರಿಸಿರುವಳು. ಇವರಲ್ಲದೇ ಸ್ವಾಯಂಭುವ ಮನು ಮತ್ತು ದಕ್ಷ. ಹೀಗೆ ಒಟ್ಟು ಆರುಮಂದಿ ಆಹಂಕಾರಿಕ ಪ್ರಾಣನಿಗಿಂತ ದಶಾವರರು. ಪ್ರವಹನಿಗಿಂತ ಪಂಚಗುಣಾಧಿಕರು. ಇಂದ್ರನಿಗಿಂತ ಶತಾವರರು-

'..ಸ್ವಾಯಂಭುವ ಮನುರ್ದಕ್ಷಃ ಷಡನ್ಯೋನ್ಯಂ ಸಮಾ ಮತಾಃ ।
ಪ್ರವಹಾತ್ ಪಂಚಗುಣತೋಽಧಿಕಾ ಇಂದ್ರಾತ್ ಶತಾವರಾಃ ॥

-ವಿಟ್ಠಲಾಚಾರ್ಯಕೃತ ತಾರತಮ್ಯ ಸದ್ರತ್ನ ಮಾಲಾದೀಪಿಕಾ

## ಕಕ್ಷ್ಯ - 11

ಹನ್ನೊಂದನೆಯ ಕಕ್ಷ್ಯೆಯಲ್ಲಿ ಬರುವ ಪ್ರವಹನು ಹಿಂದಿನ ಕಕ್ಷ್ಯೆಯ ಅನಿರುದ್ಧಾದಿಗಳಿಗಿಂತ ಪಂಚಗುಣಾಧಮನು. 'ಅನಿರುದ್ಧೋಽನಿಲಾತ್ ಪಂಚಗುಣಾಧಿಕಃ' ಎಂದು ಛಾಂದೋಗ್ಯ ಭಾಷ್ಯವು ಈ ಅಂಶವನ್ನು ಸ್ಪಷ್ಟಪಡಿಸಿದೆ.

ಕೆಲವರು-(ಛಲಾರಿ ಆಚಾರ್ಯರು)

ಮರೀಚಿನಾಮಾಂತರವಾನ್ ಪ್ರವಹೋ ಮುಖ್ಯವಾಯುಜಃ।
ಕೋಣಾಧಿಪಃ ಸ ಏವೋಕ್ತೋ ನಾಸಿಕ್ಯೋ ಭೌತಿಕಸ್ತಥಾ।
ಮುಮುಕ್ಷುಭಿರ್ಗಮ್ಯತಯಾ ಸೂತ್ರೇ ಪ್ರೋಕ್ತೋಽರ್ಚಿರಾದಿಕೇ।
ಆತಿವಾಹಿಕ ಇತ್ಯುಕ್ತಃ ಗುರೋಃ ಪಂಚಗುಣಾಧಮಃ

*(-ತಾರತಮ್ಯೋಕ್ತಿಕೌಸ್ತುಭಃ, ಶ್ಲೋಕ 14, 15)*

ಎಂಬುದಾಗಿ ಮುಖ್ಯವಾಯುವಿನ ಮಗನಾದ ಪ್ರವಹನಿಗೆ 'ಮರೀಚಿ' ಎಂಬ ಹೆಸರಿದೆ. ಅವನೇ ನಾಸಿಕ್ಯವಾಯು ಮತ್ತು ಭೂತಾಭಿಮಾನಿ. 'ಅರ್ಚಿರಾದಿನಾ ತತ್ಪ್ರಥಿತೇಃ (ಬ್ರ.ಸೂ. 4. 3. 1) ಸೂತ್ರ ಹೇಳುವಂತೆ ಅರ್ಚಿರಾದಿ ಮಾರ್ಗದಲ್ಲಿ ಹೊರಟ ಜ್ಞಾನಿಯು ವಾಯುಲೋಕಕ್ಕೆ ಬರುತ್ತಾನೆ. ಈ ವಾಯುವು ಮುಖ್ಯವಾಯುವಲ್ಲ. ಆತಿವಾಹಿಕವಾಯು (ವಾಯುವಿನ ಮಗ) ಎಂದೂ ಸೂತ್ರಕಾರರು ತೀರ್ಮಾನಿಸಿದ್ದಾರೆ- 'ಆತಿವಾಹಿಕಸ್ತಲ್ಲಿಂಗಾತ್' (ಬ್ರ.ಸೂ. 4.3.4). ಈ ಆತಿವಾಹಿಕನೇ ಪ್ರವಹನು ಎಂದು ಅಭಿಪ್ರಾಯ ಪಟ್ಟಿದ್ದಾರೆ ಇದು ವಿಮರ್ಶಾರ್ಹ ಸಂಗತಿ-

ಪ್ರವಹನಿಗೆ 'ಮರೀಚಿ' ನಾಮವಿರುವುದು ಎಲ್ಲೂ ಕಾಣುವುದಿಲ್ಲ. 'ಮರೀಚಿರ್ಮರುತಾಮಸ್ಮಿ' ಎಂಬ ಗೀತಾವಾಕ್ಯವು ಪ್ರವಹನಿಗೆ ಮರಿಚಿನಾಮ ಇರುವಲ್ಲಿ ಪ್ರಮಾಣವೆನಿಸದು. ಮರುತ್ತುಗಳಲ್ಲಿ ಪ್ರವಹನನ್ನು ಉಲ್ಲೇಖಿಸಿ ಇತರ ಮರುದ್ದೇವತೆಗಳಿಗಿಂತ ವಿಭೂತಿರೂಪದ ಸನ್ನಿಧಾನದ ಪ್ರಯುಕ್ತ ಪ್ರವಹನಿಗೆ ಈ ವಚನವು ಶ್ರೇಷ್ಠತೆಯನ್ನು ಹೇಳಲು ಪ್ರವೃತ್ತವಾಗಿಲ್ಲ. ಏಕೆಂದರೆ ನಲವತ್ತೊಂಬತ್ತು ಮರುತ್ತುಗಳಲ್ಲಿ ಪ್ರಧಾನವಾಯು ಆಹಂಕಾರಿಕ ಪ್ರಾಣರೂ ಇದ್ದಾರೆ. ಇವರಿಗಿಂತ ಪ್ರವಹನಿಗೆ ಉತ್ತಮತ್ವವನ್ನು ಹೇಳಲು ಸಾಧ್ಯವಾಗದು. ಗೀತಾತಾತ್ಪರ್ಯದಲ್ಲಿ 'ಉದವನ್ಮೇಘಚಲನಾತ್ ಮರೀಚಿಃ' (10.21) ಎಂಬಲ್ಲಿ ನೀರು ತುಂಬಿಕೊಂಡ ಮೋಡಗಳನ್ನು ನಿಯಂತ್ರಿಸುವನು (ಚಲಿಸುವಂತೆ ಮಾಡುವನು) ಎಂಬುದಾಗಿ 'ಮರೀಚಿ' ಶಬ್ದದ ಪ್ರವೃತ್ತಿನಿಮಿತ್ತವನ್ನು ಹೇಳಲಾಗಿದೆ. ಇದು ಆಥರ್ವಣೋಪನಿಷತ್ ಭಾಷ್ಯದಲ್ಲಿ (4.8) ಮುಖ್ಯವಾಯುವಿಗೆ ಶ್ರುತವಾಗಿದೆ-

ಸ್ವಕೀಯಮುದಕಂ ನದ್ಯಃ ಸಮುದ್ರೇ ನೈವ ಜಾನತೇ।
ವಾಯುಸ್ತು ತತ್ ಪೃಥಗ್ ಜ್ಞಾತ್ವಾ ಕೃತ್ವಾ ಮೇಘೇ ಪ್ರವರ್ಷತಿ ॥

ಈ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ಮರೀಚಿಶಬ್ದವು ಮುಖ್ಯಪ್ರಾಣವಾಚಕವೇ ಹೊರತು ಪ್ರವಹನನ್ನು ಬೋಧಿಸಲಾರದು.

ಇದರಂತೆ 'ಪ್ರಧಾನವಾಯುಜೋ ಭೂತವಾಯುರ್ನಾಮ್ನಾ ಮರೀಚಿಕಃ' (ಗೀತಾ.ತಾ. ಅ. 13) ಎಂಬ ಗೀತಾತಾತ್ಪರ್ಯವಚನವೂ ಪ್ರವಹನಿಗೆ ಮರೀಚೀನಾಮವನ್ನು ತಿಳಿಸುತ್ತಿಲ್ಲ. ಇಲ್ಲಿ ಪ್ರಧಾನವಾಯುವಿನ ಮಗನಾದ ಮರೀಚಿ ಎಂಬ ಹೆಸರಿನವನಿಗೆ ಭೂತವಾಯು

ಶಬ್ದವಾಚ್ಯತ್ವವನ್ನು ನಿರೂಪಿಸಲಾಗಿದೆ. ಆದ್ದರಿಂದ ಪ್ರವಹನಿಗೆ ಮರೀಚಿನಾಮವನ್ನು ವ್ಯವಹರಿಸಿದಂತಾಗದು.

ಇದರಂತೆ ಪ್ರವಹನಿಗೆ ನಾಸಿಕ್ಯವಾಯು ಎಂಬ ವ್ಯಪದೇಶವೂ ಇರುವುದಿಲ್ಲ. ಐತರೇಯ ಭಾಷ್ಯದಲ್ಲಿ ಮೂಗಿನಿಂದ ಜನಿಸಿದ ಪ್ರಧಾನ ವಾಯುವಿನ ಮಗನಿಗೆ ಪ್ರಾಣಶಬ್ದ ವ್ಯವಹಾರವಿದೆ-

'ತಥೈವ ನಾಸಿಕಾತೋಽಭೂತ್ ಮುಖ್ಯವಾಯೋಃ ಸುತೋ ಮರುತ್ । ಪ್ರಾಣೋ ವಾಯುರಿತಿ ದ್ವೇಧಾ ।'

ಇದಲ್ಲದೇ 'ತೇಹ ನಾಸಿಕ್ಯಂ ಪ್ರಾಣಮುದ್ಗೀಥಮುಪಾಸಾಂ ಚಕ್ರಿರೇ' ಎಂಬುದಾಗಿ ಛಾಂದೋಗ್ಯದಲ್ಲಿ ನಾಸಿಕ್ಯನಲ್ಲಿ ಪ್ರಾಣಶಬ್ದವಿದೆ. ಪ್ರವಹನಿಗೆ ಎಲ್ಲೂ ಪ್ರಾಣಶಬ್ದವಾಚ್ಯತ್ವ ವಿರುವುದು ಕಾಣುವುದಿಲ್ಲ. ಆಹಂಕಾರಿಕ ಪ್ರಾಣ ಮತ್ತು ಮುಖ್ಯಪ್ರಾಣರಲ್ಲಿ ಪ್ರಾಣಶಬ್ದವ್ಯವಹಾರವಿರುವುದು ಸ್ಪಷ್ಟ. ಆದ್ದರಿಂದ ಆಹಂಕಾರಿಕ ಪ್ರಾಣನೇ ನಾಸಿಕೆಯಿಂದ ಜನಿಸಿದ್ದು ವಾಯುಪುತ್ರನೂ ಆಗಿದ್ದು 'ನಾಸಿಕ್ಯ' ಎನಿಸಿದ್ದಾನೆ ಹೊರತು ಪ್ರವಹನಲ್ಲ.

**ಸನಕಾದಿಗಳು ಅಶ್ವಿನೀದೇವತೆಗಳಿಗಿಂತ ಅವರರು**

ಕೆಲವು ಜ್ಞಾನಿಗಳು ಪ್ರವಹ- ಯಮರ ನಡುವೆ ಸನಕಾದಿಗಳನ್ನು ವರ್ಣಿಸುತ್ತಾರೆ- 'ಸನಕಾದ್ಯಾ ಯಮಾದುಚ್ಚಾಃ ಕುಮಾರಾದಿತರೇ ತ್ರಯಃ । ತದುಚ್ಚಃ ಪ್ರವಹೋ ವಾಯುಃ ।( )

ಈ ವಿವರಣೆ ಭಾರತ ತಾತ್ಪರ್ಯನಿರ್ಣಯಕ್ಕೆ ಅನುಗುಣವಾಗಲಾರದು-

ಅಲ್ಲಿ ತೃತೀಯಾಧ್ಯಾಯದಲ್ಲಿ 'ನಾಸತ್ಯದಸ್ರೌ ಕ್ರಮಶಃ ಪ್ರಸೂತಾಃ। ತತಃ ಸನಾದ್ಯಾಶ್ಚ' ಎಂಬುದಾಗಿ ಅಶ್ವಿನೀದೇವತೆಗಳ ನಂತರ ಸನಕಾದಿಗಳ ಉತ್ಪತ್ತಿಯನ್ನು ವರ್ಣಿಸಲಾಗಿದೆ. 'ಉಕ್ತಕ್ರಮಾತ್ ಪೂರ್ವಭವಸ್ತು ಯೋ ಯಃ ಶ್ರೇಷ್ಠಃ ಸಸ' (ಶ್ಲೋ.29) ಮುಂದಿನ ವಾಕ್ಯದಲ್ಲಿ ಮೊದಲು ಹುಟ್ಟಿದವರಿಗೆ ಶ್ರೇಷ್ಠತೆಯನ್ನು ಸಮರ್ಥಿಸಲಾಗಿದ್ದು ಇದರಂತೆ ಅಶ್ವಿನೀದೇವತೆಗಳ ನಂತರ ಜನಿಸಿದ ಸನಕಾದಿಗಳು ಅವರಿಗಿಂತ ಮೇಲಿನ ಕಕ್ಷ್ಯೆಯಲ್ಲಿ ಗಣನಾಯೋಗ್ಯರಲ್ಲ ಆದ್ದರಿಂದ ನಾಸತ್ಯ- ದಸ್ರರ ನಂತರ ಮರೀಚಿಯು ಹುಟ್ಟಿದನು. ಅವನ ನಂತರ ಪಾವಕ. ಆನಂತರ ಪರ್ಜನ್ಯ. ಮತ್ತೆ ಸ್ವಾಹಾ- ಬುಧ- ಉಷಾ- ಶನಿ- ಪುಷ್ಕರ- ಆಜಾನಜದೇವತೆಗಳು ಕ್ರಮವಾಗಿ ಜನಿಸಿದರೆಂದು ಭಾರತ ತಾತ್ಪರ್ಯನಿರ್ಣಯದ ಆಶಯವಾಗಿದೆ.

**ಒಂದೇ ಕಕ್ಷ್ಯೆಯಲ್ಲಿರುವವರಿಗೂ ಅಲ್ಪ ತಾರತಮ್ಯವಿದೆ**

ಒಂದೇ ಕಕ್ಷೆಯಲ್ಲಿದ್ದರೂ ಕಾರಣಾಂತರಗಳಿಂದ ಅಲ್ಪಶ್ರೇಷ್ಠತೆಯನ್ನು ಒಪ್ಪುವುದು ಅನಿವಾರ್ಯವಾಗುವುದು. ಇಂದ್ರ- ಕಾಮರಂತೆ ನಾರದ- ಭೃಗುಋಷಿಗಳಲ್ಲಿ ಅಲ್ಪ ವೈಷಮ್ಯವಿದೆ. ನಾರದರು ದೇವರ್ಷಿಗಳಾದ ಪ್ರಯುಕ್ತ ಶ್ರೇಷ್ಠರು. ಮಹರ್ಷಿಗಳಾದ ಭೃಗು ಸ್ವಲ್ಪ

ಅವರರೆನಿಸುವರು. ಹತ್ತನೆಯ ಕಕ್ಷೆಯಲ್ಲಿ ಬರುವ ಸ್ವಾಯಂಭುವಮನು- ದಕ್ಷಪ್ರಜಾಪತಿಗಳಲ್ಲಿ ಮಾವನೆನಿಸಿದ ಮನು ಶ್ರೇಷ್ಠನೆನಿಸುವನು. 'ಶ್ವಶುರಃ ಪಂಚಮೋ ಗುರುಃ' ಅಲ್ಲವೆ?

ಇದರಂತೆ ಸನಕಾದಿಗಳು- ಹನ್ನೊಂದುಮನುಗಳು ಹತ್ತೊಂಬತ್ತನೆಯ ಕಕ್ಷೆಯಲ್ಲಿದ್ದರೂ ಪರಮಹಂಸರಾದ ಸನಕಾದಿಗಳು ಗೃಹಸ್ಥರಾದ ಮನುಗಳಿಗಿಂತ ಶ್ರೇಷ್ಠರೆನಿಸುವರು. ವೈವಸ್ವತ ಮನು- ಸಪ್ತರ್ಷಿಗಳು ಹದಿನಾರನೆಯ ಕಕ್ಷೆಯಲ್ಲಿದ್ದು ಸಮರೆನಿಸಿದರೂ ಸಪ್ತರ್ಷಿಗಳು ಬ್ರಾಹ್ಮಣರಾದ ಕಾರಣ ಶ್ರೇಷ್ಠರು, ವೈವಸ್ವತನು ಕ್ಷತ್ರಿಯನಾದ ಕಾರಣ ಅವರನೆನಿಸುವನು. ಇಂತಹ ಸ್ಥಳಗಳಲ್ಲಿ ಒಂದೊಂದು ಗುಣವನ್ನು ಮೂರು ಅಥವಾ ನಾಲ್ಕು ವಿಭಾಗ ಮಾಡಿದಾಗ ಬರುವ ಅಂಶಗಳಿಂದ ವ್ಯತ್ಯಾಸವನ್ನು ಅರಿಯಬೇಕು.

## ಕಕ್ಷ್ಯ - 12

ಯಮ- ಚಂದ್ರ- ಸೂರ್ಯ- ಶತರೂಪಾದೇವಿಯು ಪ್ರವಹನಿಗಿಂತ ದ್ವಿಗುಣಾಧಮರು. ವಾಯುದೇವರ ವಿಶೇಷಾವೇಶಯುತನಾದ ಯುಧಿಷ್ಠಿರ- ಜಾಂಬವಾನ್- ವಿದುರ- ಸತ್ಯಜಿತ್ (ಮೂರನೆಯ ಮನ್ವಂತರದ ಇಂದ್ರ) ಇವು ಯಮನ ಅವತಾರಗಳು. ಬ್ರಹ್ಮದೇವರ ಆವೇಶಯುತನಾಗಿ ಸೂರ್ಯನು ಸುಗ್ರೀವನಾಗಿ ಜನಿಸಿದನು. ಇವನೇ ಕರ್ಣನಾಗಿ ದ್ವಾಪರದಲ್ಲಿ ಜನಿಸಿದನು. ಇಂದ್ರನ ಆವೇಶವುಳ್ಳ ಚಂದ್ರನೇ ಅಂಗದನಾಗಿ ಜನಿಸಿದನು.

### ದೇವತಾತಾರತಮ್ಯವು ಸರ್ವಗುಣಗಳಿಂದಲೂ ವಿವಕ್ಷಿತ

ಬೃಹಸ್ಪತಿಯು ಹತ್ತನೆಯ ಕಕ್ಷ್ಯೆಯಲ್ಲಿರುವನು. ಚಂದ್ರಸೂರ್ಯರು ಹನ್ನೆರಡನೆಯ ಕಕ್ಷೆಯಲ್ಲಿರುವರು. ಮೇಲಿನ ಕಕ್ಷ್ಯೆಯಲ್ಲಿರುವ ಬೃಹಸ್ಪತಿಗಿಂತ ಸೂರ್ಯನಲ್ಲಿ ಪ್ರಭಾಧಿಕ್ಯ ಹೇಗೆ ಬಂದಿತು? ಸಮಕಕ್ಷ್ಯರಾದ ಸೂರ್ಯ- ಚಂದ್ರರಲ್ಲಿ ಸಮಾನಪ್ರಭೆ ಇರಬೇಕಲ್ಲವೆ? ಎಂಬ ಪ್ರಶ್ನೆ ಇಲ್ಲಿ ಸಹಜ.

ಕೆಲವರು ಜ್ಞಾನ- ಭಕ್ತಿ ಮೊದಲಾದ ಗುಣಗಳಿಂದಲೇ ತಾರತಮ್ಯವು ವಿವಕ್ಷಿತ. ಪ್ರಭಾಗುಣದಿಂದ ತಾರತಮ್ಯವು ಅವಿವಕ್ಷಿತ ಎನ್ನುತ್ತಾರೆ. ಆದರೆ ಸಂಪ್ರದಾಯವಿದರು ಹೀಗೆ ಸಂದೇಶಿಸುತ್ತಾರೆ-

ದೇವತೆಗಳಲ್ಲಿ ಸರ್ವಗುಣಗಳಿಂದಲೂ ಉಚ್ಚತ್ವವು ಸಂಸಾರ ಮತ್ತು ಮುಕ್ತಿಯಲ್ಲಿ ವಿವಕ್ಷಿತವಾಗಿದೆ. ಆದ್ದರಿಂದ ಪ್ರಭಾಧಿಕ್ಯವು ಉತ್ತಮರಲ್ಲಿ ಇದ್ದೆ ಇರುತ್ತದೆ. ಪ್ರಸಕ್ತ ನಾವು ಕಾಣುವ ಪ್ರಭೆಯು ಮಂಡಲದ ಪ್ರಭೆಯಾಗಿದ್ದು ಅಭಿಮಾನಿದೇವತೆಗಳ ಪ್ರಭೆ ನಮಗೆ ಗೋಚರವಾಗಿಲ್ಲ. ಇದು ನಮ್ಮ ಪ್ರತ್ಯಕ್ಷಯೋಗ್ಯವೂ ಅಲ್ಲ. 'ದೃಶ್ಯಂತೇ ಚಾಧಿಕಾರಿಭಿಃ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಈ ಪ್ರಭೆ ಯೋಗಿಗಳಿಂದ ತಿಳಿಯಲ್ಪಡುವುದು ಎನ್ನಲಾಗಿದೆ. ಅಭಿಮಾನಿದೇವತೆಗಳಲ್ಲಿ ಹೆಚ್ಚಿನ ಪ್ರಭೆ ಇರುವಲ್ಲಿ ಮಂಡಲದಲ್ಲಿ ಕಾಣಿಸದಿರುವುದು ಅಥವಾ ಕಡಿಮೆ ಯೋಗ್ಯತೆ ಇರುವಲ್ಲಿ ಹೇಗೆ ಹೆಚ್ಚು ಪ್ರಭೆ ಕಾಣಿಸುವುದು? ಇತ್ಯಾದಿ ಪ್ರಶ್ನೆ ಇಲ್ಲಿ ಸಹಜ.

ವರುಣನಿಗಿಂತ ಗಂಗೆ ಅವರಳಾದರೂ ಭಗವಂತನ ವಿಶಿಷ್ಟ ಸನ್ನಿಧಾನದ ನಿಮಿತ್ತದಿಂದ ಭಾಗೀರಥೀಜಲದಲ್ಲಿ ಮಹಿಮಾಧಿಕ್ಯವಿರುವಂತೆ ಸೂರ್ಯಮಂಡಲದಲ್ಲಿ ಶ್ರೀಹರಿಯ ತೇಜೋವಿಶೇಷ ಸನ್ನಿಧಾನವನ್ನು ಒಪ್ಪಿಯೂ ಮಂಡಲದ ಪ್ರಭಾಧಿಕ್ಯವನ್ನು ಉಪಪಾದಿಸ ಬಹುದಾಗಿದೆ.

## ಕಕ್ಷ್ಯ - 13

ಈ ಕಕ್ಷ್ಯೆಯಲ್ಲಿ ಬರುವ ವರುಣನು ಚಂದ್ರಾದಿಗಳಿಗಿಂತ 3/8 ಭಾಗ ಕಡಿಮೆ ವರುಣನ ಅವತಾರಗಳು- ಮಹಾಭಿಷಕ್ (ರಾಜ) ಮಂಡೂಕ (ಕಪ್ಪೆಯರೂಪದಿಂದ ಉಪನಿಷತ್ತನ್ನು ಉಪದೇಶಿಸಿದವ) ಸುಷೇಣ (ಕಪಿ) ಶಂತನು ಎಂಬುದಾಗಿವೆ.

## ಕಕ್ಷ್ಯ - 14

ವರುಣನಿಗಿಂತ ನಾರದನು ಕಿಂಚಿದಧಮನು.

## ಕಕ್ಷ್ಯ - 15

ಅಗ್ನಿ-ಪ್ರಸೂತಿ (ದಕ್ಷನ ಮಡದಿ) ಭೃಗು ಇವರು ನಾರದರಿಗಿಂತ ಸ್ವಲ್ಪ ಅವರರೆನಿಸುವರು. ಧೃಷ್ಟದ್ಯುಮ್ನ- ಲವ-ನೀಲ (ಕಪಿ) ಇವು ಅಗ್ನಿಯ ಅವತಾರಗಳು. ಭೃಗು, ಜರಾವ್ಯಾಧನಾಗಿ ಜನಿಸಿರುವನು. ಶ್ರೀವ್ಯಾಸರಾಜರ ಪ್ರಶಿಷ್ಯರಾದ ವಿಠಲಾಚಾರ್ಯರು ಮತ್ತು ಅನೇಕರು ಪ್ರಹ್ಲಾದನಲ್ಲಿ ವಾಯುದೇವರ ಆವೇಶ ಇರುವ ಕಾರಣ ಹದಿನೈದನೆಯ ಕಕ್ಷೆಯಲ್ಲಿ ಸೇರಿಸಿದ್ದಾರೆ-

'ವಾಯುಯುಕ್ ಬಾಹ್ಲಿಕಃ ಪೂರ್ವಂ ಪ್ರಹ್ಲಾದೋ ನಾರದಾಧಮಃ ।
ಕರ್ಮಜೇಭ್ಯಃ ಸ ದೇವೇಭ್ಯಃ ಗುಣಾಧಿಕ ಇತೀರಿತಃ ॥'

*-ತಾರತಮ್ಯ ಸದ್ರತ್ನಮಾಲಾದೀಪಿಕಾ ಶ್ಲೋ-29*

ತಾತ್ವಿಕ ದೇವತೆಗಳನ್ನು ನಾರದರನ್ನು ಹೊರತು ಪ್ರಹ್ಲಾದನಿಗಿಂತ ಶ್ರೇಷ್ಠರಾರಿರುವರು? ಎಂಬ ಭಾಗವತತಾತ್ಪರ್ಯವಚನವು ಮೇಲಿನ ಆಶಯವನ್ನು ಪೋಷಿಸುತ್ತಿದೆ-

ಋತೇ ತು ತಾತ್ವಿಕಾನ್ ದೇವಾನ್ ನಾರದಾದೀಂಸ್ತಥೈವ ಚ ।
ಪ್ರಹ್ಲಾದಾದುತ್ತಮಃ ಕೋ ನು ವಿಷ್ಣುಭಕ್ತೋ ಜಗತ್ತ್ರಯೇ ॥ *- ಭಾ. ತಾ. 7. 10. 22*

ವಾಯುದೇವರ ಆವೇಶವು ಇತರ ದೇವತೆಗಳ ಅವತಾರಕಾಲದಲ್ಲಿ ಇರುವುದಿದೆ. ಇಂತಹ ಆವೇಶವು ಸ್ವರೂಪಾಧಿಕ್ಯವನ್ನು ನೀಡಲಾರದು. ಆ ಅವತಾರದಲ್ಲಿ ಅಸಾಧಾರಣ ಕಾರ್ಯವನ್ನು ಆವೇಶದ ಮೂಲಕ ಸಮರ್ಥಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಪ್ರಹ್ಲಾದನನ್ನು 19ನೆಯ ಕಕ್ಷೆಯಲ್ಲಿಯೇ ಪರಿಗಣಿಸಬೇಕೆಂದು ಕೆಲವರ ಅಭಿಪ್ರಾಯವಿದೆ.

## ಕಕ್ಷ್ಯ 16

ಸಪ್ತರ್ಷಿಗಳು-ವೈವಸ್ವತಮನು ವಿಶ್ವಾಮಿತ್ರನೆಂಬುದಾಗಿ ಒಂಬತ್ತು ಮಂದಿ ಪೂರ್ವೋಕ್ತರಿಂದ ದ್ವಿಗುಣಾವರರು. ಮರೀಚಿ - ಅತ್ರಿ- ಅಂಗಿರಸ- ಪುಲಸ್ತ್ಯ- ಪುಲಹ- ಕ್ರತು- ವಶಿಷ್ಠ ಎಂಬುದಾಗಿ ಏಳು ಮಂದಿ ಋಷಿಗಳು 'ಸಪ್ತರ್ಷಿ' ಗಳೆಂದು ಪ್ರಸಿದ್ಧರಾಗಿದ್ದಾರೆ.

## ಕಕ್ಷ್ಯ - 17

ಮಿತ್ರನಾಮಕ ಸೂರ್ಯ- ನಿರ್‌ಋತಿ- ಪ್ರಾವಹೀ(ಪ್ರವಹನಪತ್ನಿ) - ತಾರಾ (ಬೃಹಸ್ಪತಿಯ ಮಡದಿ) ಎಂಬುದಾಗಿ ನಾಲ್ವರು ಹಿಂದಿನ ಕಕ್ಷ್ಯೆಯವರಿಗಿಂತ ಕಿಂಚಿದವರರು. ರಾಹು ಎಂಬ ದೈತೇಯನ ಅಂಶಯುಕ್ತನಾಗಿ ಮಿತ್ರನು, ಭೀಷ್ಮಕನಾಗಿ ಜನಿಸಿದನು. ತಾರೆಯು ಕೃಪನ ತಂಗಿಯಾಗಿ 'ಕೃಪಾ' ಎನಿಸಿದ್ದಾಳೆ. ನಿರ್‌ಋತಿಯು ದುರ್ಮುಖನೆಂಬ ಕಪಿಯಾಗಿಯೂ ರುದ್ರದೇವರ ಆವೇಶಯುಕ್ತನಾಗಿ ಘಟೋತ್ಕಚನಾಗಿಯೂ ಜನಿಸಿದ್ದಾನೆ.

## ಕಕ್ಷ್ಯ - 18

ವಿಷ್ವಕ್‌ಸೇನ - ಗಣಪತಿ- ಕುಬೇರ- ಅಶ್ವಿನೀದೇವತೆಗಳು ಶತಗಣಸ್ಥರಾದ 85 ದೇವತೆಗಳು ಮಿತ್ರನಿಗಿಂತ ಕಿಂಚಿತ್ ಅವರರು.

### ಸೋಮಪಾನಾರ್ಹದೇವತೆಗಳು

ಒಂಬತ್ತು ಕೋಟಿ ಪ್ರಧಾನದೇವತೆಗಳಲ್ಲಿ ನೂರು ಮಂದಿಗೆ ಸೋಮದ ಆಹುತಿಯ ಗೌರವ ಸಲ್ಲುತ್ತದೆ. ಮುಖ್ಯವಾಯು ಮತ್ತು ಶ್ರೀಹರಿ ಸೇರಿ 102 ಮಂದಿ ಸೋಮಪಾನಾರ್ಹರು-

'ನವಕೋಟ್ಯೋ ಹಿ ದೇವಾನಾಂ ತೇಷಾಂ ಮಧ್ಯೆ ಶತಸ್ಯ ತು ।
ಸೋಮಾಧಿಕಾರೋ ವೇದೋಕ್ತೋ ಬ್ರಹ್ಮಣೇ ದ್ವೇ ಶತಾಧಿಕೇ ॥

*- ಬ್ರ. ಸೂ. ಭಾ. 3. 4. 11*

ಇವರ ವಿವರ ತತ್ತ್ವಪ್ರದೀಪದಲ್ಲಿ ಹೀಗಿದೆ-

| | |
|---|---|
| ಪ್ರಧಾನ ವಾಯು | 01 |
| ವಸುಗಳು | 08 |
| ರುದ್ರರು | 11 |
| ಆದಿತ್ಯರು | 12 |
| ಮರುತ್ತುಗಳು | 49 |
| ವಿಶ್ವೇದೇವತೆಗಳು | 10 |
| ಬೃಹಸ್ಪತಿ | 01 |
| ಪಿತೃಪರು | 03 |
| ಅಶ್ವಿನೀದೇವತೆಗಳು | 02 |

| | |
|---|---|
| ಋಭು | 01 |
| ದ್ಯಾವಾ-ಪೃಥಿವೀ | 02 |
| | **100** |

ಇದನ್ನು ಶ್ರೀರಾಯರು ಶ್ರೀನಿವಾಸತೀರ್ಥರೇ ಮೊದಲಾದವರು ಉಲ್ಲೇಖಿಸಿದ್ದಾರೆ.

**ಋಭುಗಳು ಯಾರು?**

ಮೇಲೆ ಕಾಣಿಸಿದ ಋಭುಗಳು ಯಾರು? ಕೆಲವರ ಆಶಯ ಹೀಗಿದೆ-

'ಬೃಹಸ್ಪತಿರ್ಋಭುರ್ದ್ಯಾವಾಪೃಥಿವ್ಯೌ' ಎಂಬಲ್ಲಿ 'ಋಭು' ಪದದಿಂದ ಸಾವಿರದ ಗುಂಪನ್ನು ತೆಗೆದುಕೊಳ್ಳಬೇಕು 'ಅಧ್ವರ್ಯುಣಾ ಹೂಯಮಾನಾಃ ದೇವಾಃ ಸರ್ವೇ ಸಮಾಯಯುಃ। ಋಭವೋ ನಾಮ ತಪಸಾ ಸೋಮಂ ಪ್ರಾಪ್ತಾಃ ಸಹಸ್ರಶಃ।' ಎಂಬುದಾಗಿ ಭಾಗವತದಲ್ಲಿ ಉಲ್ಲೇಖಿಸಿದ ಒಂದು ಸಾವಿರ ದೇವತೆಗಳ ಗುಂಪೇ ಋಭುಶಬ್ದವಾಚ್ಯವಾಗಿದೆ. ಮೂಲದಲ್ಲಿ ಸಮುದಾಯ್ಯೈಕವಚನವನ್ನು ಪ್ರಯೋಗಿಸಲಾಗಿದೆ.

ಈ ವಾದವು ಸಮಂಜಸವೆನಿಸದು- 'ವಿಭಾಗಃ ಶತವತ್' (ಬ್ರ.ಸೂ. 3.4.11) ಎಂಬ ಸೂತ್ರಭಾಷ್ಯ ತತ್ತ್ವಪ್ರಕಾಶಿಕಾದಲ್ಲಿ ಎಲ್ಲದೇವತೆಗಳಿಗೂ ಸೋಮಾಧಿಕಾರವಿಲ್ಲವೆಂದು ಸ್ಫುಟಪಡಿಸಲಾಗಿದೆ. ತಪಸ್ಸಿನಿಂದ ಸೋಮವನ್ನು ಪಡೆದ ಋಭುಗಳು( ಸಾವಿರದ ಒಂದು ಗುಂಪು)ವೇದೋಕ್ತಸೋಮಪಾನಾರ್ಹಶತಸ್ಥ ಗುಂಪಿನಲ್ಲಿ ಸೇರುವುದಿಲ್ಲ.

ಮತ್ತೆ ಕೆಲವರು- ಋಭು-ವಿಭ್ವಾ-ವಾಜ ಎಂಬುದಾಗಿ ಋಭುಗಳು ಮೂವರು ಎನ್ನುತ್ತಾರೆ. ಋಭು ಶಬ್ದಕ್ಕೆ ಮೂವರಲ್ಲಿ ಶಕ್ತಿ ಇಲ್ಲ. ಲಕ್ಷಣಾವೃತ್ತಿಯಿಂದ ಮೂವರನ್ನು ತೆಗದುಕೊಳ್ಳಲು ಅನ್ವಯಾನುಪಪತ್ತಿ ಅಥವಾ ತಾತ್ಪರ್ಯಾನುಪಪತ್ತಿ ಇಲ್ಲ. 'ಅಯಂ ದೇವಾಯ' (ಋಗ್ವೇದ 1.2.1) ಎಂಬ ಮಂತ್ರವ್ಯಾಖ್ಯಾನಮಾಡುವಾಗ ಟೀಕೆಯಲ್ಲಿ - 'ತ್ರಯಾಣಾಂ ಮಧ್ಯೆ ಋಭುರ್ನಾಮ್ಯೈಕ ಏವ । ವಿಭ್ವಾ ವಾಜಶ್ಚಾಪರೌ । ತಥಾಪಿ ಸಾಹಚರ್ಯಾದೇವ ನಾಮ್ನಾ ತ್ರಯೋಽಪಿ ಉಚ್ಯಂತೇ' ಎಂದಿದ್ದಾರೆ. ಇದರಿಂದ ಋಭು ಎಂಬುವವನು ಒಬ್ಬನೆಂದು ಸ್ಪಷ್ಟವಾಗುತ್ತದೆ. 'ಶೈಬ್ಯನಾಮರ್ಭುರಗ್ರಃ' ಎಂಬ ಭಾರತತಾತ್ಪರ್ಯ ನಿರ್ಣಯದಲ್ಲಿ ಶೈಬ್ಯನೆಂದು ಇವನ ನಾಮಾಂತರವನ್ನು ಉಲ್ಲೇಖಿಸಲಾಗಿದೆ. 'ವಿಶಂತಿ ಶಿಷ್ಟಾ ಅಪಿ ಹವ್ಯವಾಹಮ್' ಎಂಬ ವಚನದಂತೆ ಇವನಿಗೆ ಅಗ್ನಿಯಲ್ಲಿ ದೇಹಲಯ. ಪೃಥಿವಿಯಲ್ಲಿ ಅಲ್ಲ. ಇನ್ನು ದ್ಯಾವಾ-ಪೃಥಿವೀ ಎಂಬಲ್ಲಿ ದ್ಯುಲೋಕಾಭಿಮಾನಿನಿಯಾದ ಶಕ್ರನ ಹೆಂಡತಿಯನ್ನು ತೆಗೆದುಕೊಳ್ಳಬೇಕು. ಪೃಥಿವೀ ಶಬ್ದದಿಂದ ದ್ರೋಣನಾಮಕ ವಸುವಿನ ಮಡದಿಯಾದ ಧರೆಯನ್ನು ತೆಗೆದುಕೊಳ್ಳದೇ ವರಾಹಭಾರ್ಯೆಯಾದ ಧರಾದೇವಿಯನ್ನು ತೆಗೆದುಕೊಳ್ಳಬೇಕು.

**ಪಿತೃಗಳು ಯಾರು ?**

ಸೋಮ-ಯಮ- ಅಗ್ನಿಗಳನ್ನು ಕೆಲವರು ಪಿತೃಗಳೆಂದು ಕರೆಯುತ್ತಾರೆ. ಪಿತೃಪದದಿಂದ

ಇವರನ್ನು ಪರಿಗ್ರಹಿಸಲು ಪ್ರಮಾಣ ದೊರಕುವುದಿಲ್ಲ. ಪಿತೃಗಳು ಮತ್ತು ದೇವತೆಗಳೂ ಆಗಿರುವ ಮೂವರೆಂದರೆ - ವಸು - ರುದ್ರ - ಆದಿತ್ಯರು. ಇವರು ಶೇಷಶತಾಂತರ್ಗತರು.

**ಅಷ್ಟವಸುಗಳು**

ದ್ರೋಣ - ಪ್ರಾಣ - ಧ್ರುವ - ಅರ್ಕ - ದೋಷ - ವಸ್ತು - ವಿಭಾವಸು - ಅಗ್ನಿ ಎಂಬುದಾಗಿ ಅಷ್ಟವಸುಗಳು-

'ದ್ರೋಣಃ ಪ್ರಾಣೋ ಧ್ರುವೋಽರ್ಕೋಽಗ್ನಿಃ ದೋಷೋ ವಸ್ತುರ್ವಿಭಾವಸುಃ ।

**ಏಕಾದಶರುದ್ರರು**

ರೈವತ- ಅಜ- ಭವ- ಭೀಮ- ವಾಮ- ಉಗ್ರ- ವೃಷಾಕಪಿ ಅಜೈಕಪಾತ್- ಅಹಿರ್ಬುಧ್ನಿ - ಬಹುರೂಪ- ಮಹಾನ್ ಎಂಬುದಾಗಿ ಏಕಾದಶರುದ್ರರು.

**ದ್ವಾದಶಾದಿತ್ಯರು**

ವಿವಸ್ವಾನ್ - ಅರ್ಯಮಾ - ಪೂಷಾ - ತ್ವಷ್ಟಾ - ಸವಿತಾ - ಭಗ - ಧಾತಾ - ಪರ್ಜನ್ಯ - ವರುಣ - ಮಿತ್ರ - ಶಕ್ರ - ಉರುಕ್ರಮ ಎಂಬುದಾಗಿ ಹನ್ನೆರಡುಮಂದಿ ಆದಿತ್ಯರು ಇವರಲ್ಲಿ 'ಉರುಕ್ರಮ' ಮಹಾವಿಷ್ಣು.

**ಮರುದ್ಗಣ**

ಏಳರ ಗುಂಪಿನಂತೆ ಏಳು ವರ್ಗವು ಮರುತ್ತುಗಳಲ್ಲಿದೆ. ಈ ಗುಂಪಿನ ಹೆಸರನ್ನು ವಿಷ್ಣುರಹಸ್ಯದಲ್ಲಿ ಹಾಗೂ ದಾಸಸಾಹಿತ್ಯದಲ್ಲಿ ವಿವರಿಸಿದ್ದಾರೆ-

| | | | | | | |
|---|---|---|---|---|---|---|
| 1. ಪ್ರಾಣ | ಕೂರ್ಮ | ಪರಾವಹ | ಅನಲ | ಗುರು | ಜಡ | ಶುಕ |
| 2. ಅಪಾನ | ದೇವದತ್ತ | ಉದ್ವಹ | ಪ್ರತಿಭ | ಸಂಜ್ಞ | ಮಂಡೂಕ | ಯತಿ |
| 3, ವ್ಯಾನ | ಧನಂಜಯ | ಆವಹ | ಕುಮುದ | ಸಂವರ್ತಕ | ಸಂತತ | ಭೀಮ |
| 4 ಉದಾನ | ಪ್ರವಹ | ಶಂಕು | ಕಾಂತ | ಕಾಲ | ಸಿದ್ಧ | ಹನು |
| 5. ಸಮಾನ | ವಿವಹ | ಕಲ | ಶುಚಿ | ದತ್ತ | ಋತು | ಪಿಂಗ |
| 6. ನಾಗ | ಶಂಯು | ಶ್ವಾಸ | ಶ್ವೇತು | ಸೌಮ್ಯ | ಕೃಷ್ಣ | ಅಹಂಪ್ರಾಣ |
| 7. ಕೃಕಲ | ಸಂವಹ | ಅನಿಲ | ಅಜಿತ | ಕಪಿ | ಪಿಕ | ಕಂಪನ |

ಇವರುಗಳಿಗೆ ಬೇರೆ ಬೇರೆ ಕಡೆ ಬೇರೆ ಬೇರೆ ಹೆಸರುಗಳಿವೆ.

ಈ ಮರುತರಲ್ಲಿ ಪ್ರಾಣಾದಿ ಐದು ಮರುತರು ಶ್ರೇಷ್ಠರೆಂದು ಅವರಿಗಿಂತ ಪ್ರವಹ, ಮತ್ತು ಆಹಂಕಾರಿಕ ಪ್ರಾಣರು ಶ್ರೇಷ್ಠರೆಂದು ಭಾಗವತತಾತ್ಪರ್ಯದಲ್ಲಿ ಆಚಾರ್ಯರು ಹೇಳಿದ್ದಾರೆ.

ಉಳಿದ ಮರುತರಲ್ಲಿ ಚಕ್ರ ಗಂಧರ್ವ ಅಂತರಿಕ್ಷರೆಂದು ನಾಮಾಂತರವುಳ್ಳ ಮರುತರು ಕ್ರಮವಾಗಿ ಉಳಿದವರಿಗಿಂತ ಅಧಿಕರಾಗಿದ್ದಾರೆ.

ಈ ಏಳು ಗಣಗಳ ಮರುತರು ಕ್ರಮವಾಗಿ ಭೂಮಿಯಿಂದ ಮೇಲೆ ಧ್ರುವಮಂಡಲದ ತನಕ ಇರುತ್ತಾರೆ. ಅದು ಹೀಗೆ-

1. ಆವಹಗಣ- ಭೂಮಂಡಲದಿಂದ ಮೇಘ ಮಂಡಲದವರೆಗೆ
2. ಪ್ರವಹ ಗಣ- ಮೇಘಮಂಡಲದಿಂದ ಸೂರ್ಯಮಂಡಲದವರೆಗೆ
3. ಉದ್ವಹ ಗಣ- ಸೂರ್ಯಮಂಡಲದಿಂದ ಚಂದ್ರಮಂಡಲದವರೆಗೆ
4. ಸಂವಹಗಣ- ಚಂದ್ರಮಂಡಲದಿಂದ ನಕ್ಷತ್ರಮಂಡಲದವರೆಗೆ
5. ವಿವಹಗಣ - ನಕ್ಷತ್ರ ಮಂಡಲದಿಂದ ಗ್ರಹ ಮಂಡಲದವರೆಗೆ
6. ಪರಾವಹ ಗಣ - ಗ್ರಹಮಂಡಲದಿಂದ ಸಪ್ತರ್ಷಿಮಂಡಲದವರೆಗೆ
7. ಏಳನೆಯ ಗಣ- ಸಪ್ತರ್ಷಿಮಂಡಲದಿಂದ ಧ್ರುವಮಂಡಲದವರೆಗೆ

**ವಿಶ್ವೇದೇವತೆಗಳು**

| | |
|---|---|
| ಕ್ರತು- ದಕ್ಷ | ಇಷ್ಟಿಶ್ರಾದ್ಧದ ದೇವತೆಗಳು |
| ಸತ್ಯ- ವಸು | ನಾಂದಿಶ್ರಾದ್ಧದ ದೇವತೆಗಳು |
| ಧುರಿ- ಲೋಚನ | ಕಾಮ್ಯಶ್ರಾದ್ಧದ ದೇವತೆಗಳು |
| ಪುರೂರವ- ಆರ್ದ್ರವ | ಪಾರ್ವಣ ಶ್ರಾದ್ಧದ ದೇವತೆಗಳು |
| ಕಾಮ- ಕಾಲ | ನೈಮಿತ್ತಿಕ ಶ್ರಾದ್ಧದ ದೇವತೆಗಳು |

**ದೇವತಾತ್ರೈವಿಧ್ಯ**

ಜೀವರಲ್ಲಿ ತ್ರೈವಿಧ್ಯ ಇರುವಂತೆ ದೇವತೆಗಳಲ್ಲಿ ತ್ರೈವಿಧ್ಯ ಇರುವುದು ಗಮನಾರ್ಹ. ತಾತ್ವಿಕರು- ಕರ್ಮಜರು- ಆಜಾನಜರೆಂಬುದಾಗಿ ದೇವತೆಗಳಲ್ಲಿ ಮೂರು ಬಗೆ ಇದೆ. 'ತಾಭ್ಯಶ್ಚ ತಾತ್ತ್ವಿಕಾ ದೇವಾಃ ಸೃಷ್ಟ್ಯಾದೌ ದೇವತಾಂ ಗತಾಃ' ಎಂಬ ತೈತ್ತಿರೀಯ ಭಾಷ್ಯವಚನದಂತೆ ಪ್ರತಿಬ್ರಹ್ಮಕಲ್ಪದಲ್ಲಿ ಬ್ರಹ್ಮಾಂಡ ಸೃಷ್ಟಿಯ ಮೊದಲು ವೇದದಲ್ಲಿ ಪ್ರಸಿದ್ಧವಾದ ಬ್ರಹ್ಮ- ವಾಯು ಮೊದಲಾದ ನಾಮ- ರೂಪಗಳನ್ನು ಯಾರು ಯಾರು ಹೊಂದಿರುವರೋ ಅವರು ತಾತ್ತ್ವಿಕ ದೇವತೆಗಳು.

ಬಲಿಚಕ್ರವರ್ತಿಯೆ ಮೊದಲಾದವರುಕರ್ಮಜದೇವತೆಗಳೆನಿಸುತ್ತಾರೆ. ಅವರಿಗೆ ಬ್ರಹ್ಮಾಂಡ ಉತ್ಪತ್ತಿಯ ಮೊದಲು ಬಲಿ ಎಂಬ ನಾಮವಾಗಲೀ ನಿರ್ದಿಷ್ಟ ಶರೀರವಾಗಲೀ ಇರಲಿಲ್ಲ. ಬಲಿಯು ಬ್ರಹ್ಮಾಂಡದ ಉತ್ಪತ್ತಿಯಾಗಿ ಎಂಟನೆಯ ಮನ್ವಂತರ ಬಂದಾಗ ಹಿಂದೆ ಅನುಷ್ಠಾನಗೈದ 100 ಅಶ್ವಮೇಧ ಯಜ್ಞಗಳ ಫಲವಾಗಿ ಇಂತಹ ಕರ್ಮಾನುಷ್ಠಾನದ ಮೂಲಕ ಇಂದ್ರ ಪದವಿಗೆ ಏರುತ್ತಾನೆ. ಇಲ್ಲಿ ಕರ್ಮದಿಂದ ದೇವತಾಪದವಿಯನ್ನು ಬಲ್ಯಾದಿಗಳು

ಪಡೆಯುವರೆಂದರೆ ನಿತ್ಯ-ನೈಮಿತ್ತಿಕಗಳಿಗಿಂತ ಭಿನ್ನಕರ್ಮಗಳಿಂದ ಅಶ್ವಮೇಧಾದಿಫಲವಾಗಿ ಇಂದ್ರಪದವಿ ಪಡೆಯುವವರು ಕರ್ಮಜರೆಂದು ತಿಳಿಯಬೇಕು. ತಾತ್ವಿಕ ದೇವತೆಗಳು ನಿತ್ಯ-ನೈಮಿತ್ತಿಕ ಕರ್ಮಾನುಷ್ಠಾನದಿಂದ ದೇವತಾಪದ ಪಡೆದ; ದೇವಪದಯೋಗ್ಯಜೀವರು. ಆದರೆ ಅವರಿಗೆ ಬಲಿಯಂತೆ ನಿತ್ಯ-ನೈಮಿತ್ತಿಕಕ್ಕಿಂತ ಬೇರೆ ಕರ್ಮದ ಫಲವಾಗಿ ಪದ ದೊರಕಿರುವುದಿಲ್ಲ. ಆದ್ದರಿಂದ ತಾತ್ವಿಕ ದೇವತೆಗಳಲ್ಲಿ ಕರ್ಮಜ ದೇವತೆಗಳ ಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲ.

ಈ ಕರ್ಮಜದೇವತೆಗಳ ಲಕ್ಷಣವನ್ನು' ಅಂತರಾಪ್ರಾಪ್ತದೇವತಾಃ' ಎಂದು ಪರಿಷ್ಕರಿಸಲಾಗಿದೆ. ಬಲಿ ಮೊದಲಾದವರು ಬ್ರಹ್ಮಾಂಡದ ಮಧ್ಯದಲ್ಲಿ ಮಾತ್ರವೇ ಇಂದ್ರಾದಿ ನಾಮ ರೂಪವನ್ನು ಪಡೆಯುತ್ತಾರೆ. ಬ್ರಹ್ಮಾಂಡದ ಹೊರಗೆ ಈ ನಾಮ-ರೂಪಗಳಿಲ್ಲ. ಆದ್ದರಿಂದ ಇಂತಹವರು ಕರ್ಮಜದೇವತೆಗಳು.

ಬ್ರಹ್ಮಾಂಡ ಮಧ್ಯದಲ್ಲಿ ಬ್ರಹ್ಮ-ವಾಯು-ರುದ್ರ-ಯಮಾದಿ ದೇವತೆಗಳು ನಾಮ-ರೂಪವನ್ನು ಪಡೆದಿರುವ ಕಾರಣ ಕರ್ಮಜದೇವತೆಗಳ ಲಕ್ಷಣವು ತಾತ್ತ್ವಿಕರಲ್ಲಿ ಅತಿವ್ಯಾಪ್ತವಾಗುವುದೆಂದು ಶಂಕೆ ಇಲ್ಲಿ ಸಹಜ. ಆದರೆ ಬ್ರಹ್ಮಾದಿಗಳು ಬ್ರಹ್ಮಾಂಡದ ಮಧ್ಯದಲ್ಲಿ ಮತ್ತು ಅದರ ಸೃಷ್ಟಿಯ ಮೊದಲು ವೇದೋಕ್ತ ನಾಮ-ರೂಪಗಳನ್ನು ಪಡೆದಿದ್ದಾರೆ. ಕರ್ಮಜದೇವತೆಗಳೆಂದರೆ ಬ್ರಹ್ಮಾಂಡಮಧ್ಯದಲ್ಲಿ ಮಾತ್ರವೇ ವೇದೋಕ್ತ ನಾಮರೂಪ ಪಡೆದವರು. ಬ್ರಹ್ಮಾದಿಗಳಲ್ಲಿ ಇಂತಹ ಏವಕಾರಘಟಿತ (ಬ್ರಹ್ಮಾಂಡಮಧ್ಯೆ ಏವ) ಲಕ್ಷಣ ಬರುವುದಿಲ್ಲ.

ಯಾರ ಹೆಸರನ್ನು ವೇದವು ಉಲ್ಲೇಖಿಸಿಲ್ಲವೋ ಮತ್ತು ದೇವತೆಗಳ ಕುಲದಲ್ಲಿ ಜನಿಸಿರುವರೋ ಅವರು ಆಜಾನಜದೇವತೆಗಳು.

## ಕಕ್ಷ್ಯ - 19

ಈ ಕಕ್ಷೆಯಲ್ಲಿ ಜಯಂತನೇ ಮೊದಲಾದ ತತ್ತ್ವದೇವತೆಗಳು. ಪ್ರಹ್ಲಾದನೇ ಮೊದಲಾದವರು ಎಲ್ಲ ಕರ್ಮಜ ದೇವತೆಗಳನ್ನು ತಗೆದುಕೊಳ್ಳಬೇಕು. ಇವರು ಶೇಷಶತಸ್ಥದೇವತೆಗಳಿಗಿಂತ ಅಧಮರು ಪರ್ಜನ್ಯನಿಗಿಂತ ಉತ್ತಮರು. ಈ ಸಂಗತಿಯು 'ತದನ್ಯೇ ತು ತತೋಽವರಾಃ' ಎಂಬ ಅನುವ್ಯಾಖ್ಯಾನ ವ್ಯಾಖ್ಯಾನ ಸಮಯದಲ್ಲಿ ಶ್ರೀಸುಧಾದಲ್ಲಿ ಸ್ಪಷ್ಟವಾಗಿದೆ-

'ತದನ್ಯೇ ಉಕ್ತೇಭ್ಯೋಽನ್ಯೇ ದೇವಾಃ ತತಃ ಶತಾಂತರ್ಗತದೇವತಾಭ್ಯೋಽವರಾಃ ಅವರಮನುಸಮಾನಾ ಇತ್ಯರ್ಥಃ'

ಈ ಕಕ್ಷೆಯ ವಿವರ ಹೀಗಿದೆ-

ಪಾದಾಭಿಮಾನಿಗಳಾದ ಇಂದ್ರನ ಪುತ್ರರಾದ ಯಜ್ಞ-ಶಂಭು. ಯಜ್ಞನಿಗೇ ಜಯಂತ ಎನ್ನುವುದು ನಾಮಾಂತರ.

**ಸಪ್ತೇಂದ್ರರು**

ಭಾವಿ ಮನ್ವಂತರದ ಸಪ್ತೇಂದ್ರರು - 1. ಬಲಿ, 2. ಅದ್ಭುತ, 3. ಶಂಭು, 4. ವಿಧೃತಿ, 5. ಋತಧಾಮಾ, 6. ದಿವಸ್ಪತಿ, 7. ಶುಚಿ.

**ಹನ್ನೊಂದು ಮನುಗಳು**

1, ಸ್ವಾರೋಚಿಷ 2, ಉತ್ತಮ 3, ರೈವತ 4, ಚಾಕ್ಷುಷ 5, ಸಾವರ್ಣಿ 6, ದಕ್ಷಸಾವರ್ಣಿ 7, ಬ್ರಹ್ಮಸಾವರ್ಣಿ 8, ಧರ್ಮಸಾವರ್ಣಿ 9, ರುದ್ರಸಾವರ್ಣಿ 10, ದೇವಸಾವರ್ಣಿ 11, ಇಂದ್ರಸಾವರ್ಣಿ ಇವರಲ್ಲದೇ-

ಪಿತೃಯಾನ ಮಾರ್ಗಸ್ಥರಾದ ಧೂಮಾದಿದೇವತೆಗಳು ದೇವಯಾನಮಾರ್ಗದಲ್ಲಿರುವ ಪ್ರವಹನನ್ನು ಹೊರತುಪಡಿಸಿ ಅರ್ಚಿರಾದಿಕರ್ಮಜ ದೇವತೆಗಳು.

ಪ್ರಧಾನಾಗ್ನಿ ಪುತ್ರನಾದ ಪಾವಕ. ಇವನಿಗೇ 'ಅರ್ಚಿ' ಎಂಬ ನಾಮಾಂತರ ಇದೆ.

ಪ್ರಧಾನವಾಯುಪುತ್ರನಾದ ಭೂತವಾಯುಮಾನಿ ಮರೀಚಿ.

ಮೇಷಾದಿರಾಶಿಗಳಲ್ಲಿ ಸಂಚರಿಸುವ ನವಗ್ರಹದೇವತೆಗಳು.

ಇವರಲ್ಲಿ ಸೂರ್ಯ- ಚಂದ್ರ- ಬೃಹಸ್ಪತಿಯ ವಿವರ ಹಿಂದೆ ಬಂದಿದೆ. ಇವರನ್ನು ಬಿಟ್ಟು ಶನಿ- ಬುಧರ ಬಗ್ಗೆ ಮುಂದೆ ಬರಲಿದೆ- ಮಂಗಲ- ಶುಕ್ರ- ರಾಹು- ಕೇತುಗಳು ಇವರಲ್ಲಿ ಬಾಕಿ ಉಳಿದವರು.

ವಾಸ್ತವಿಕವಾಗಿ ರಾಹುವು ದೈತ್ಯನಾದರೂ ವರಬಲದಿಂದ ಗ್ರಹತ್ವವನ್ನು ಪಡೆದಿರುತ್ತಾನೆ. ರಾಹುವಿನ (ತಲೆಯಲ್ಲಿ)ಲ್ಲಿ ದೇವತೆಗಳನೇಕರ ಸನ್ನಿಧಾನವಿದೆ. ಇದರಂತೆ ದೇವತೆಗಳ ಒಂದು ಗುಂಪು 'ಕೇತು' ಎನಿಸಿದೆ.

ಬ್ರಹ್ಮಣೈಷಾಂ ವರೋ ದತ್ತಃ ಪೂಜಿತಾಃ ಪೂಜಯಿಷ್ಯಥ ।

ಎಂಬುದಾಗಿ ಬ್ರಹ್ಮನಿಂದ ವರ ಕೊಡಲ್ಪಟ್ಟ ಹಿನ್ನಲೆಯಲ್ಲಿ ಈ ನವಗ್ರಹ ದೇವತಾರಾಧನೆ ಅನಿವಾರ್ಯ.

**ದ್ವಾರಪಾಲಕರು**

ಜಯ- ವಿಜಯ- ಚಂಡ- ಪ್ರಚಂಡ- ನಂದ- ಸುನಂದ- ಕುಮುದ- ಕುಮುದೇಕ್ಷಣ.

ಇವರಂತೆ ಈ ಕಕ್ಷೆಯಲ್ಲಿ ಸೇರಿದ ಇತರರು-

ಓಷಧಿ- ವನಸ್ಪತಿ ದೇವತೆಗಳು

ಅಂತರಿಕ್ಷಾಭಿಮಾನಿ ಗಣೇಶ ಪುತ್ರ

ಪರ್ವತ ಸರೋವರ- ನದಿಗಳು- ಬಾವಿ- ಸರೋವರದ ದೇವತೆಗಳು.

ಮೃಜಿನ- ಪುಷ್ಕರರೆಂಬ ವಿಷ್ಣುಪಾರ್ಷದರು.

ಹವಿಃ- ಕಪಾಲ- ಯೂಪಾಭಿಮಾನಿಗಳು

ಪಾರಿಜಾತವೇ ಮೊದಲಾದ ಕಲ್ಪವೃಕ್ಷ ದೇವತೆಗಳು

ಪ್ರಹ್ಲಾದ- ಸಹ್ಲಾದ- ಅನುಹ್ಲಾದ (ಪ್ರಹ್ಲಾದರಲ್ಲಿ ವಾಯುದೇವರ ಆವೇಶವನ್ನು ಗಮನದಲ್ಲಿರಿಸಿ 15ನೇ ಕಕ್ಷೆಯಲ್ಲಿ ಪರಿಗಣಿಸುವುದೂ ಇದೆ)

ವಿಭೀಷಣ- ಬಾಣ ವಿಶ್ವಕರ್ಮಾ (ದೇವತೆಗಳ ಬಡಗಿ)

ಚ್ಯವನ (ಶುಕ್ರಾನುಜ)

ಉಚಥ್ಯ- (ಬೃಹಸ್ಪತಿಯ ತಮ್ಮ)

ಇಂದ್ರಾಂಶನಾದ ಸನತ್ಕುಮಾರನನ್ನು ಹೊರತುಪಡಿಸಿ ಸನಕ- ಸನಂದನ- ಸನಾತನರು ಹಾಗೂ ವ್ಯಾಪ್ತದರ್ಶಿ 90 ಮಂದಿ ಋಷಿಗಳು.

**100 ವ್ಯಾಪ್ತದರ್ಶಿರಾಜರು**

ಪೃಥು- ಕಾರ್ತವೀರ್ಯ- ಶಶಬಿಂದು- ಪ್ರಿಯವ್ರತ- ಉತ್ತಾನಪಾದ- ಮಾಂಧಾತ- ಗಯ- ಕಕುಸ್ಥ- ನಹುಷ- ಅಂಬರೀಷ- ದೌಷ್ಯಂತಿಭರತ- ಋಷಭಪುತ್ರ ಭರತ- ಪ್ರಹ್ಲಾದ- ಪರೀಕ್ಷಿತ ಮೊದಲಾದವರು.

**ಪಿತೃಸಪ್ತಕ**

ಹತ್ತು ಪಿತೃಪತಿಗಳಲ್ಲಿ ಹಿಂದೆ ಬಂದ ಯಮ- ಸೋಮ- ಕವ್ಯವಾಹನನ್ನು ಹೊರತುಪಡಿಸಿ ಸೋಮಸದ- ಅಗ್ನಿಷ್ವಾತ್ತ- ಬರ್ಹಿಷದ- ಸೋಮಪ- ಹವಿರ್ಭುಜ- ಆಜ್ಯಪ- ಸುಕಾಲಿನ ಎಂಬುದಾಗಿ ಏಳು ಮಂದಿ ಪಿತೃಪತಿಗಳು ಈ ಕಕ್ಷ್ಯಾನಿಷ್ಠರು.

ಷೋಡಶಕಲಾದೇವತೆಗಳಲ್ಲಿ ಕೆಲವರು.

ಅಭಿಜಿತ್- ಪೌರ್ಣಮಾಸೀ- ವಿಷುವದೇವತೆಗಳು.

**ಆರು ಅಪ್ಸರಾಸ್ತ್ರೀಯರು**

ಊರ್ವಶಿ- ಪೂರ್ವಚಿತ್ತಿ- ಸಹಜನ್ಯಾ- ಮೇನಕಾ- ವಿಶ್ವಾಚೀ- ಘೃತಾಚೀ

ಎಂಟು ತುಂಬುರು ಮೊದಲಾದ ಗಂಧರ್ವರು.

**ಕಕ್ಷ್ಯಾ-20**

ಹನ್ನೆರಡು ಆದಿತ್ಯರಲ್ಲಿ ಒಬ್ಬನಾದ ಪರ್ಜನ್ಯ- ಗಂಗಾ- ಯಮನ ಪತ್ನಿ ಶಾಮಲಾ- ಚಂದ್ರನ

ಮಡದಿ ರೋಹಿಣೀ- ಅನಿರುದ್ಧನ ಭಾರ್ಯೆ ಉಷಾ- ಸೂರ್ಯನ ಮಡದಿ ಸಂಜ್ಞಾ- ಇವರು ಹಿಂದಿನ ಕಕ್ಷೆಯವರಿಗಿಂತ ಸ್ವಲ್ಪ ಅವರರು.

## ಕಕ್ಷ್ಯ-21

'ಕೂರ್ಮೋ ದೃಷ್ಟೋ ವಿಷ್ಣುಪದ್ಯಾಂ' ಎಂಬುದಾಗಿ ಭಾರತತಾತ್ಪರ್ಯ ನಿರ್ಣಯದಲ್ಲಿ ವರ್ಣಿಸಿದಂತೆ ಕೂರ್ಮವು ಪರ್ಜನ್ಯ ಸಮಾನ ಗಂಗಾ ದೇವಿಗಿಂತ ಅವರವೆಂದು ಉಲ್ಲೇಖವಿದೆ. ಆದ್ದರಿಂದ ಹಿಂದಿನ ಕಕ್ಷೆಯ ಪರ್ಜನ್ಯನಿಗಿಂತ ಕೆಳಗಿನ ಕಕ್ಷೆಯೊಂದು ವಿದಿತವಾಗುವುದು. ವಾಸ್ತವಿಕವಾಗಿ ಶ್ರೀಮನ್ನ್ಯಾಯಸುಧೆಯಲ್ಲಿ ಈ ಕಕ್ಷೆಯ ಉಲ್ಲೇಖವಿಲ್ಲದಿದ್ದರೂ, 'ತದನ್ಯೇ ತು ತತೋಽವರಾಃ' ಎಂಬ ಅನುವ್ಯಾಖ್ಯಾನ ವ್ಯಾಖ್ಯಾನ ಮಾಡುವಾಗ ಸನ್ನ್ಯಾಯರತ್ನಾವಲಿಯಲ್ಲಿ -'ತದನ್ಯೇ ಯೇಽಪ್ರಸಿದ್ಧಾಧಿಕಾರಾ ದೇವಾಸ್ತೇ ಪರ್ಜನ್ಯಾದವರಾಃ' ಎಂದು ಈ ಕಕ್ಷೆಯನ್ನು ಉಲ್ಲೇಖಿಸಲಾಗಿದೆ. ನವಕೋಟಿದೇವತೆಗಳಲ್ಲಿ ಅಪ್ರಸಿದ್ಧಾಧಿಕಾರಿಕ ದೇವತೆಗಳನ್ನು ಸನ್ನ್ಯಾಯರತ್ನಾವಲಿಯಲ್ಲಿ ಹೇಳಿದ್ದರಿಂದ ಪ್ರಸಿದ್ಧಾಧಿಕಾರಿಕದೇವತೆಗಳನ್ನು ಸುಧೆಯಲ್ಲಿ ಉಲ್ಲೇಖಿಸಿದ್ದಾರೆ. ಆದ್ದರಿಂದ ಎರಡು ಗ್ರಂಥಗಳಲ್ಲಿ ವಿರೋಧವಿಲ್ಲ.

## ಕಕ್ಷ್ಯ-22

ಅಗ್ನಿಯ ಪತ್ನಿಯಾದ ಸ್ವಾಹಾ ಕೂರ್ಮಾದಿಗಳಿಗಿಂತ ಅಲ್ಪಾಧಮಳು ಪರ್ಜನ್ಯನಿಗಿಂತ ದ್ವಿಗುಣಾಧಮಳು.

## ಕಕ್ಷ್ಯ- 23

ಜಲಕಲಾಭಿಮಾನಿಯಾದ ಬುಧನು ಸ್ವಾಹಾದೇವಿಗಿಂತ ಅಲ್ಪಾವರನು.

## ಕಕ್ಷ್ಯ-24

ನಾಮಾಖ್ಯ ಕಲಾಭಿಮಾನಿನಿಯಾದ ಉಷೆ (ಅಶ್ವಿಗಳ ಮಡದಿ) ಬುಧನಿಗಿಂತ ಕಿಂಚಿತ್ ಅವರಳು. ಸ್ವಾಹಾದೇವಿಗಿಂತ ದಶಗುಣಾಧಮಳು.

## ಕಕ್ಷ್ಯ-25

ಭೂಮ್ಯಾಖ್ಯ ಕಲಾಭಿಮಾನಿ ಶನೈಶ್ಚರನು ಉಷೆಗಿಂತ ಕಿಂಚಿತ್ ಅವರನು.

## ಕಕ್ಷ್ಯ- 26

ಕರ್ಮಮಾನಿಯಾದ ಪುಷ್ಕರನು ಶನೈಶ್ಚರನಿಗಿಂತ ಕಿಂಚಿತ್ ನೀಚನು, ಉಷೆಗಿಂತ ದಶಗುಣಾಧಮನು.

**ಪುಷ್ಕರ-ಶನೈಶ್ಚರರು ತಾತ್ವಿಕ ದೇವತೆಗಳಲ್ಲ.**

ಕೆಲವು ಮನೀಷಿಗಳು 'ತತ್ವಾಭಿಮಾನಿದೇವೇಷು ಹ್ಯಧಮಾತ್ ಪುಷ್ಕರಾದಪಿ ।' 'ಅಧಮಃ ಪುಷ್ಕರೋ ಜ್ಞೇಯಃ' ಎಂಬ ಪ್ರಮಾಣವಚನಗಳು ಮತ್ತು 'ದೇವೇಷು ತಾತ್ವಿಕೇಷ್ವಂತ್ಯೋ ನೀಚೋಽಸ್ಯಾ ಉಷಸಃ ಶನಿಃ' ಎಂಬ ಪ್ರಮಾಣವಚನಗಳ ಆಪಾತಾರ್ಥವನ್ನು ಪರಿಗ್ರಹಿಸಿ ಪುಷ್ಕರ ಮತ್ತು ಶನೈಶ್ಚರನನ್ನು ತತ್ತ್ವಾಭಿಮಾನಿ ದೇವತೆಗಳೆಂದು ಕರೆಯುತ್ತಾರೆ.

ಇದು ವಿಮರ್ಶಾರ್ಹಸಂಗತಿ. ತತ್ವ ಶಬ್ದವು ಪ್ರಕೃತ ಪ್ರಮೇಯವಾಚಿಯಲ್ಲ. ನಿರ್ದಿಷ್ಟ ಪದಾರ್ಥ ವಿಶೇಷಗಳನ್ನು ತಿಳಿಸುವುದಾಗಿದೆ. ತಂತ್ರಸಾರ ಸಂಗ್ರಹದಲ್ಲಿ ಶ್ರೀಮದಾಚಾರ್ಯರು ತತ್ವಾಭಿಮಾನಿಗಳನ್ನು ಹೀಗೆ ನಿರೂಪಿಸಿದ್ದಾರೆ-

ಪುರುಷೋಽವ್ಯಕ್ತಂ ಚ ಮಹಾನ್ ಅಹಂಕಾರೋ ಮನಸ್ತಥಾ ।
ದಶೇಂದ್ರಿಯಾಣಿ ಶಬ್ದಾದ್ಯಾಃ ಭೂತೇತಾಃ ಪಂಚವಿಂಶತಿಃ ॥ 3. 129

ತತ್ವಾಖ್ಯಾಃ........................................ ।
................................ ಬ್ರಹ್ಮಾತು ಪುರುಷಃ ಸ್ಮೃತಃ ।
ಮಹಾಂಶ್ಚಾವ್ಯಕ್ತನಾಮ್ನೀ ತು ಬ್ರಹ್ಮಾಣೀ ಸಂಪ್ರಕೀರ್ತಿತಾ ।
... ಇಂದ್ರಿಯಾಖ್ಯಾ ಶಬ್ದನಾಮಾ ಬೃಹಸ್ಪತಿರುದಾಹೃತಃ ।
ಅನ್ಯೇ ತು ಸೂನವೋ ವಾಯೋ ರುದ್ರಸ್ಯಾಪಿ ಪ್ರಕೀರ್ತಿತಾಃ ॥

*- ಅ. 3. ಶ್ಲೋ- 133- 37*

| | |
|---|---|
| ಪುರುಷತತ್ತ್ವಕ್ಕೆ ಹಾಗೂ ಮಹತ್ತತ್ವಕ್ಕೆ | ಬ್ರಹ್ಮ-ವಾಯುಗಳು ಅಭಿಮಾನಿಗಳು |
| ಅವ್ಯಕ್ತತತ್ವಕ್ಕೆ | ಸರಸ್ವತೀ ಭಾರತಿಯರು ಅಭಿಮಾನಿಗಳು |
| ಅಹಂಕಾರತತ್ವಕ್ಕೆ | ರುದ್ರದೇವರು-ಶೇಷ-ಗರುಡರುಗಳು ಅಭಿಮಾನಿಗಳು |
| ಮನಸ್ತತ್ವಕ್ಕೆ | ಸ್ಕಂದ-ಇಂದ್ರರು ಅಭಿಮಾನಿಗಳು |
| ಶ್ರೋತ್ರ | ದಿಗ್ ದೇವತೆಗಳು ಅಭಿಮಾನಿಗಳು |
| ತ್ವಕ್ | ವಾಯುಪುತ್ರ ಪ್ರಾಣ ಅಭಿಮಾನಿ |
| ಚಕ್ಷುಸ್ | ಸೂರ್ಯ ಅಭಿಮಾನಿ |
| ಜಿಹ್ವಾ | ವರುಣ ಅಭಿಮಾನಿ |
| ಘ್ರಾಣ | ಅಶ್ವಿನೀದೇವತೆಗಳು ಅಭಿಮಾನಿಗಳು |
| ವಾಕ್ | ವಹ್ನಿ ಅಭಿಮಾನಿ |
| ಪಾಣಿ | ದಕ್ಷಪ್ರಜಾಪತಿ ಅಭಿಮಾನಿ |

| | |
|---|---|
| ಪಾದ | ಜಯಂತ ಅಭಿಮಾನಿ |
| ಪಾಯು | ಮಿತ್ರ ಅಭಿಮಾನಿ |
| ಉಪಸ್ಥ | ಸ್ವಾಯುಂಭುವ ಮನು ಅಭಿಮಾನಿ |
| ಶಬ್ದ ತತ್ವಕ್ಕೆ | ಬೃಹಸ್ಪತಿ-ಪ್ರಾಣರು ಅಭಿಮಾನಿಗಳು |
| ಸ್ಪರ್ಶತತ್ವಕ್ಕೆ | ಅಪಾನ ಅಭಿಮಾನಿ |
| ರೂಪ ತತ್ವಕ್ಕೆ | ವ್ಯಾನ ಅಭಿಮಾನಿ |
| ರಸ ತತ್ವಕ್ಕೆ | ಉದಾನ ಅಭಿಮಾನಿ |
| ಗಂಧ ತತ್ವಕ್ಕೆ | ಸಮಾನ ಅಭಿಮಾನಿ |

(ಇಲ್ಲಿ ಅಪಾನಾದಿ ನಾಲ್ಕು ಶಬ್ದಗಳಿಂದ ವಾಯು ಮತ್ತು ರುದ್ರರ ಮಕ್ಕಳು ವಾಚ್ಯರು)

| | |
|---|---|
| ಆಕಾಶ ತತ್ವಕ್ಕೆ | ಗಣಪತಿ ಅಭಿಮಾನಿ |
| ವಾಯು ತತ್ವಕ್ಕೆ | ಪ್ರವಹವಾಯು ಅಭಿಮಾನಿ |
| ತೈಜಸ ತತ್ವಕ್ಕೆ | ವಹ್ನಿ ಅಭಿಮಾನಿ |
| ಅಪ್ ತತ್ವಕ್ಕೆ | ವರುಣ ಅಭಿಮಾನಿ |
| ಪೃಥಿವೀ ತತ್ವಕ್ಕೆ | ಧರಾ ಅಭಿಮಾನಿ |

ಇವರು ಬ್ರಹ್ಮಾಂಡದ ಹೊರಗಿನ ಅಸಂಸ್ಪೃಷ್ಟವೆನಿಸಿದ ಪಂಚಮಹಾಭೂತಗಳಿಗೂ ಬ್ರಹ್ಮಾಂಡದ ಒಳಗಿರುವ ಸಂಸ್ಪೃಷ್ಟವೆನಿಸಿದ ಪಂಚಮಹಾಭೂತಗಳಿಗೂ ಅಭಿಮಾನಿಗಳು.

ಶನಿ-ಬುಧ-ಪಾವಕ- ಮರೀಚಿಗಳು ಪೃಥಿವ್ಯಾದಿ ಮಹಾಭೂತಗಳ ದೇವತೆಗಳಲ್ಲ. ಶರೀರಕ್ಕೆ ಉಪಾದಾನಕಾರಣವಾದ ಶರೀರದ ಭಾಗವೆನಿಸಿರುವ ಕಲಾರೂಪವಾದ ಭೌತಿಕವಾದ ಪೃಥಿವ್ಯಾದಿಗಳಿಗೆ ದೇವತೆಗಳೆನಿಸುವರು. ಕಲಾದೇವತೆಗಳ ವಿವರವನ್ನು ಷಟ್ ಪಶ್ನೋಪನಿಷತ್ತಿನಲ್ಲಿ ಹೀಗೆ ವಿವರಿಸಲಾಗಿದೆ-

'ಸ ಪ್ರಾಣಮಸೃಜತ। ಪ್ರಾಣಾತ್ ಶ್ರದ್ಧಾಂ ಖಂ ವಾಯುರ್ಜ್ಯೋತಿರಾಪಃ ಪೃಥಿವೀಂದ್ರಿಯಂ ಮನೋಽನ್ನಮನ್ನಾದ್ ವೀರ್ಯಂ ತಪೋ ಮಂತ್ರಾಃ ಕರ್ಮ ಲೋಕಾಃ ಲೋಕೇಷು ನಾಮ ಚ ॥' ಷಟ್ ಪ್ರಶ್ನ. 6.4

ಕರ್ಮೇತಿ ಪುಷ್ಕರಃ ಪ್ರೋಕ್ತಃ ಉಷಾ ನಾಮಾಭಿಮಾನಿನೀ ............ ತಸ್ಯಾಶ್ಚ ಕಾರಣಂ ಪ್ರಾಣಃ ಸರ್ವೇಷಾಮುತ್ತಮೋತ್ತಮಃ ॥

-ಷಟ್‌ಪ್ರಶ್ನಭಾಷ್ಯ

ಇಲ್ಲಿ ಕಲೆಗಳೆಂದರೆ, ಎಲ್ಲ ಜೀವಿಗಳ ಜೀವಂತಶರೀರಗಳು ಕೆಲಸ ಮಾಡಲು ಬೇಕಾದ ಪ್ರಾಣಾದಿಗಳು. ಕಲೆಗಳು ಮತ್ತು ಅಭಿಮಾನಿಗಳು. ವಿವರ ಹೀಗಿದೆ-

| ಕಲೆಗಳು | ಅಭಿಮಾನಿಗಳು | ಕಾರ್ಯವಿವರ |
|---|---|---|
| 1. ಪ್ರಾಣ | ಮುಖ್ಯಪ್ರಾಣ | ಜೀವಕಲೆಗೆ ಅಭಿಮಾನಿ, ಅವನಿಂದಲೇ ಶರೀರದ ಸಕಲ ಪ್ರವೃತ್ತಿಗಳು. |
| 2. ಶ್ರದ್ಧಾ | ಭಾರತೀ | ಸತ್ಕರ್ಮಗಳನ್ನು ಮಾಡಲು ಅಗತ್ಯವಿರುವ ಆಸ್ತಿಕ್ಯಬುದ್ಧಿ. |
| 3. ಮನಸ್ಸು | ರುದ್ರ | ಶರೀರ ಪ್ರವೃತ್ತಿ ಕಾರಣವಾದ ಮನಸ್ಸು |
| 4. ಇಂದ್ರಿಯ | ಇಂದ್ರ | ಜ್ಞಾನೇಂದ್ರಿಯಗಳ ಚಟುವಟಿಕೆಗೆ ಬೇಕಾದ ಐದು ಇಂದ್ರಿಗಳು |
| 5. ಅನ್ನ | ಚಂದ್ರ | ಜನಿಸಿದ ಶರೀರದ ಸ್ಥಿತಿಕಾರಣ |
| 6. ವೀರ್ಯ | ವರುಣ | ಶರೀರಜನನಕ್ಕೆ ಕಾರಣ |
| 7. ತಪಸ್ | ಅಗ್ನಿ | ಜ್ಞಾನಾದಿಗಳಿಗೆ ಕಾರಣವಾಗಿ ಸುಖ ಸಾಧನ |
| 8. ಆಕಾಶ | ಗಣೇಶ | ಶರೀರದ ಉತ್ಪತ್ತಿ ಮೂಲಕಾರಣ |
| 9. ವಾಯು | ಮರೀಚಿ | ಭೂತವಾಯು |
| 10. ಅಗ್ನಿ | ಪಾವಕ (ಅಗ್ನಿಪುತ್ರ) | ಅಗ್ನಿಗೆ ಅವಾಂತರಾಭಿಮಾನಿ |
| 11. ಲೋಕ | ಪರ್ಜನ್ಯ | ಇಂದ್ರಿಯಗಳ ಆಶ್ರಯಸ್ಥಾನಗಳು |
| 12. ಮಂತ್ರ | ಸ್ವಾಹಾ | ಜೀವರ ಜ್ಞಾನಸಾಧನವಾದ ಸಾಹಿತ್ಯ |
| 13. ಅಪ್ | ಬುಧ | ಜಲಕ್ಕೆ ಬುಧನು ಅವಾಂತರಾಭಿಮಾನಿ |
| 14. ನಾಮ | ಉಷೆ | ವ್ಯವಹಾರ ಹೇತು |
| 15. ಪೃಥಿವೀ | ಶನಿ | ಅವಾಂತರಾಭಿಮಾನಿದೇವತೆ |
| 16. ಕರ್ಮ (ಪುಣ್ಯ-ಪಾಪಗಳು) | ಪುಷ್ಕರ | |

ಈ ಹದಿನಾರು ಕಲೆಗಳಲ್ಲಿ ಕೆಲವು ಜೀವರಿಗೆ ಮತ್ತು ಕೆಲವು ಶರೀರಕ್ಕೆ ಉಪಕಾರಕ. ಇವೆಲ್ಲದರ ಸೃಷ್ಟಿ ಶ್ರೀಹರಿಯಿಂದ. ಆದ್ದರಿಂದ ಅವನನ್ನು ಉಪನಿಷತ್ತು 'ಷೋಡಶಕಲಃ ಪುರುಷಃ' ಎಂದಿದೆ.

ಇಲ್ಲಿ ಗಮನಿಸಬೇಕಾದುದು ಬುಧ-ಶನೈಶ್ಚರ ಮೊದಲಾದವರು ಕಲಾದೇವತೆಗಳೇ ಹೊರತು ತತ್ವದೇವತೆಗಳಲ್ಲ.

## ಕಕ್ಷ್ಯಾ - 27

ವೇದಗಳಲ್ಲಿ ಯಾರ ನಾಮ-ರೂಪಗಳು ಹೇಳಲ್ಪಟ್ಟಿಲ್ಲವೋ ಮತ್ತು ಯಾರು ದೇವಕುಲದಲ್ಲಿ ಜನಿಸಿರುವರೋ, ದೇವತೆಗಳ ಸೇವಾಕಾರ್ಯದಲ್ಲಿ ನಿರತರಾಗಿರುವರೋ ಅವರು ಆಜಾನಜದೇವತೆಗಳೆನಿಸುವರು. ಇವರು ಕರ್ಮಜದೇವತೆಗಳಿಗಿಂತ ಶತಗುಣಾಧಮರು. ಶ್ರೀಕೃಷ್ಣನ ಮಡದಿಯರಾಗಿದ್ದ 16100 ಸ್ತ್ರೀಯರು. (ಪೂರ್ವದಲ್ಲಿ ಅಗ್ನಿಪುತ್ರರು) ತಪಸ್ಸಿನಿಂದ

ವರ ಪಡೆದು ಶ್ರೀಕೃಷ್ಣನ ಅಂಗಸಂಗಪಡೆದವರು. 'ಕಶೇರು' ಎಂಬುವವನು ಮೂಲರೂಪದಲ್ಲಿ ಸ್ತ್ರೀಯಾಗಿ ಜನಿಸಿದಾಗಲೂ ಉಳಿದವರಿಗಿಂತ ಕಿಂಚಿತ್ ಶ್ರೇಷ್ಠನು. 16100 ಜನ ಕೃಷ್ಣಪತ್ನಿಯರಿಗಿಂತ ಬಾಲ್ಯದಲ್ಲಿ ಅಂಗಸಂಗಪಡೆದ ಗೋಪಾಂಗನೆಯರು ದ್ವಿಗುಣಾಧಮರು. ಇವರಲ್ಲಿ ಕೆಲವರು ಕಾತ್ಯಾಯನೀ ವ್ರತದಿಂದ ಶ್ರೀಕೃಷ್ಣನನ್ನು ಒಲಿಸಿಕೊಂಡವರು. ಮತ್ತೆ ಕೆಲವರು ವಿವಾಹಿತರಾದರೂ ಕೃಷ್ಣನಿಂದ ಅನುಗೃಹೀತರಾದವರು. ಈ ಎರಡು ಗುಂಪೂ ಮೂಲತಃ ಅಪ್ಸರಸ್ತ್ರೀಯರೆನಿಸಿರುವರು.

ಇವರಂತೆ ಈ ಕಕ್ಷ್ಯಾ ಪ್ರವಿಷ್ಟರು-

ಪಿತೃಗಳು 100, ಅಸುರರು 30, ಗಂಧರ್ವರು 100, ಅಪ್ಸರೆಯರು 100, ಯಕ್ಷರು 70, ರಾಕ್ಷಸರು 70, ಚಾರಣರು 30, ಸಿದ್ಧರು 100.

ಇವರಲ್ಲದೆ ವಿದ್ಯಾಧರರು- ಕಿನ್ನರರು- ಪಿಶಾಚಿಗಳು- ಭೂತಗಳು ಮೊದಲಾದ ದೇವೋತ್ಪನ್ನರು ಆಜಾನಜಕಕ್ಷೆಯಲ್ಲಿ ಉಪಾಸ್ಯರು. ಇಲ್ಲಿ ತಿಳಿಸಿದ ಪಿಶಾಚರು ರಾಕ್ಷಸರು- ಭೂತಗಳು ಮೂಲತಃ ದೇವತೆಗಳ ಸೇವಕವರ್ಗಕ್ಕೆ ಸೇರಿದ ದೇವತೆಗಳ ಗುಂಪಿಗೆ ಸೇರಿದವರೇ, ಪಾಪದಿಂದ ಅಥವಾ ಕಾರಣಾಂತರಗಳಿಂದ ಹುಟ್ಟಿದವರಲ್ಲ-

'ದೇವಸರ್ಗಶ್ಚಾಷ್ಟವಿಧೋ ವಿಭುಧಾಃ ಪಿತರಃ ಸುರಾಃ।
ಗಂಧರ್ವಾಪ್ಸರಸಃ ಸಿದ್ಧಾಃ ಯಕ್ಷರಕ್ಷಾಂಸಿ ಚಾರಣಾಃ।
ಭೂತಪ್ರೇತಪಿಶಾಚಾಶ್ಚ ವಿದ್ಯಾಧ್ರಾಃ ಕಿನ್ನರಾದಯಃ ॥'

## ಕಕ್ಷ್ಯಾ- 28

ಋಷಿಗಳು ಈ ಕಕ್ಷೆಯಲ್ಲಿ ಬರುತ್ತಾರೆ ಋಷಿಗಳ ಒಟ್ಟು ಸಂಖ್ಯೆ ನೂರು ಕೋಟಿ- 'ನವಕೋಟ್ಯಸ್ತು ದೇವಾನಾಮ್ ಋಷಯಃ ಶತಕೋಟಯಃ' (ಭಾ.ತಾ.6.14) ಇವರಲ್ಲಿ ವ್ಯಾಪ್ತದರ್ಶಿಗಳು- ಅಂತದರ್ಶಿಗಳೆಂದೂ ಎರಡುಬಗೆ ಇದೆ. ನಾರದಾದಿ ಶತಸಂಖ್ಯಾಕರು ವ್ಯಾಪ್ತದರ್ಶಿಗಳು. ತಮ್ಮ ಒಳಗೆ ಇರುವ ದೇವರನ್ನು ಕಾಣುವ ಅಂತರ್ದರ್ಶಿಗಳಾದ ಋಷಿಗಳು ಆಜಾನಜರಿಗಿಂತ ಶತಗುಣಾಧಮರು. ಹೀಗೆ ನಾರದಾದಿ ನೂರರ ಗುಂಪನ್ನು ಬಿಟ್ಟು ''ಶತೋನ ಶತಕೋಟಿ ಋಷಿಗಳು (99.99.99.900) ಈ ಕಕ್ಷೆಯಲ್ಲಿ ಬರುತ್ತಾರೆ.

## ಕಕ್ಷ್ಯಾ-29

ಹಿಂದೆ ಬಂದ 110 ಪಿತೃಗಳನ್ನು ಹೊರತು ಪಡಿಸಿ ಉಳಿದ ಚಿರಪಿತೃಗಳು ಋಷಿಗಳಿಗಿಂತ ಶತಾವರರು.

## ಕಕ್ಷ್ಯಾ-30

108 ಗಂಧರ್ವರನ್ನು ಹೊರತು ಪಡಿಸಿ ಉಳಿದೆಲ್ಲ ಗಂಧರ್ವರು ಚಿರಪಿತೃಗಳಿಗಿಂತ ಶತಾವರರು.

### ಕಕ್ಷ್ಯ - 31

ದೇವ ಗಂಧರ್ವರಿಗಿಂತ ಮನುಷ್ಯ ಗಂಧರ್ವರು ಶತಾವರರು. ಮಧ್ಯವರ್ತಿಗಳ ಮೂಲಕ ದೇವತೆಗಳ ಆದೇಶವನ್ನು ಪಡೆದು ಅವರ ಸೇವೆ ನಡೆಸುವವರು ಮನುಷ್ಯ ಗಂಧರ್ವರು.

### ಕಕ್ಷ್ಯ - 32

ಮನುಷ್ಯ ಗಂಧರ್ವರಿಗಿಂತ, ಹಿಂದೆ ತಿಳಿಸಿದ ಕರ್ಮಜದೇವತಾ ಕಕ್ಷೆಯಲ್ಲಿ ಸೇರಿದ ಕಾರ್ತವೀರ್ಯಾದಿ ರಾಜರನ್ನ ಹೊರತುಪಡಿಸಿ ಉಳಿದ ರಾಜರೆಲ್ಲ ಶತಾವರರು.

### ಕಕ್ಷ್ಯ 33

ರಾಜರಿಗಿಂತ ಮನುಷ್ಯೋತ್ತಮರು ಶತಗುಣಾವರರು.

## ದೈತ್ಯತಾರತಮ್ಯ

ಮುಕ್ತಿಯೋಗ್ಯರ ತಾರತಮ್ಯವನ್ನು ತಿಳಿದಂತೆ ತಮೋಯೋಗ್ಯರಾದ ದೈತ್ಯರ ತಾರತಮ್ಯವನ್ನು ಅವಶ್ಯವಾಗಿ ತಿಳಿಯಬೇಕು. ಇದನ್ನು ಗರುಡಪುರಾಣವು ನಿರೂಪಿಸಿದೆ. ಹರಿಕಥಾಮೃತಸಾರದಲ್ಲಿ ಇದರ ವಿವರ ಇದೆ. ಸಣ್ಣಪುಟ್ಟ ವ್ಯತ್ಯಾಸಗಳೊಂದಿಗೆ ಇದರ ಸಾರವನ್ನು ಹೀಗೆ ಸಂಗ್ರಹಿಸಬಹುದು-

### ದೈತ್ಯತಾರತಮ್ಯ

ಮೂಲರೂಪ

| | | | |
|---|---|---|---|
| 1. | ಕಲಿ. | ದುರ್ಯೋಧನ | ಅನಂತದೋಷಾಕರ |
| 2. | ಅಲಕ್ಷ್ಮಿ | ಮಂಥರಾ/ ಭಾನುಮತಿ | ಶತಗುಣನ್ಯೂನಳು |
| 3. | ವಿಪ್ರಚಿತ್ತಿ+ | ಜರಾಸಂಧ | ಶತಗುಣನ್ಯೂನ |
| | ನರಕಾಸುರ | ನರಕಾಸುರ | ,, |
| 4. | ಕಾಲನೇಮಿ+ ವಿಕರ್ಣ | ಕಂಸ | ಶತಗುಣನ್ಯೂನ |
| 5. | ಮಧು-ಕೈಟಭರು | ಹಂಸ- ಡಿಭಿಕರು | ಪಂಚಗುಣಾವರರು |
| 6. | ಹಿರಣ್ಯಕಶಿಪು | ಹಿರಣ್ಯಕಶಿಪು | ಶತಗುಣಾವರ |
| 7. | ಹಿರಣ್ಯಾಕ್ಷ+ ಮಣಿಮಾನ್ | | ತ್ರಿಗುಣಹೀನರು |
| 8. | ಬಕಾಸುರ | | ಕಿಂಚಿದೂನ |
| 9. | ತಾರಕಾಸುರ | | 20 ಗುಣ ನ್ಯೂನ |
| 10. | ಶಂಬರಾಸುರ+ ಸಾಲ್ವ | | ಷಡ್ಗುಣನ್ಯೂನ |
| 11. | ಹಿಡಿಂಬ+ ಬಾಣಾಸುರ + ದ್ವಾಪರ | | ತ್ರಿಗುಣನ್ಯೂನ |

| | | |
|---|---|---|
| 12. | ನಮುಚಿ + ವಾತಾಪಿ + ಇಲ್ವಲ | ಶತಾವರರು |
| 13. | ಧೇನುಕ | ತ್ರಿಗುಣಹೀನ |
| 14. | ಕೇಶೀ + ಲವಣಾಸುರ | ಕಿಂಚಿದಧಮ |
| 15. | ಲವಣಾಸುರ | ಪೂರ್ವೋಕ್ತರಿಗಿಂತ ದಶಗುಣಾಧಮ |
| 16. | ಅರಿಷ್ಟಾಸುರ | ಪಂಚಗುಣಹೀನ |
| 17. | ಹಂಸಾಸುರ+ ವೇನ ಕಾಲಕೇಯ+ ಪೌಂಡ್ರಕಾಸುರ | ನವಗುಣಾವರ |
| 18. | ಕುಭಾಂಡ ಕೂಪಕರ್ಣ | ದಶಗುಣಾಧಮರು |

***

## 'ಮಧುರೇಣ ಸಮಾಪಯೇತ್' ಎಂಬ ನ್ಯಾಯದಂತೆ ಕಕ್ಷ್ಯಾತಾರತಮ್ಯದ ವಿವರ ಮನನ ಮಾಡೋಣ

| | | |
|---|---|---|
| 1. | ಶ್ರೀಮನ್ನಾರಾಯಣ | ಅನಂತಗುಣಪೂರ್ಣ |
| 2. | ಶ್ರೀ ಮಹಾಲಕುಮಿದೇವಿ | ಅನಂತಾನಂತಗುಣಕಡಿಮೆ |
| 3. | ಬ್ರಹ್ಮದೇವ - ವಾಯುದೇವ | ಕೋಟಿ ಗುಣ ಕಡಿಮೆ |
| 4. | ಸರಸ್ವತೀದೇವಿ - ಭಾರತೀದೇವಿ | 100 |
| 5. | ಗರುಡದೇವ - ಶೇಷದೇವ - ರುದ್ರದೇವ | 100 |
| 6. | ಜಾಂಬವತೀ - ಕಾಳಿಂದೀ-ನೀಲಾ-ಭದ್ರಾ-ಮಿತ್ರವಿಂದಾ-ಲಕ್ಷಣಾ | 5 |
| 7. | ಸೌಪರ್ಣಿದೇವಿ-ವಾರುಣಿದೇವಿ-ಪಾರ್ವತಿದೇವಿ | 2 |
| 8. | ಇಂದ್ರದೇವ - ಕಾಮದೇವ | 10 |
| 9. | ಅಹಂಕಾರಿಕ ಪ್ರಾಣದೇವ | 10 |
| 10. | ಸ್ವಾಯಂಭುವಮನು - ದಕ್ಷಪ್ರಜಾಪತಿ - ಬೃಹಸ್ಪತಿ- ಅನಿರುದ್ಧ-ಶಚೀದೇವಿ-ರತಿದೇವಿ | 10 |
| 11. | ಪ್ರವಾಹ ವಾಯುದೇವ | 5 |
| 12. | ಸೂರ್ಯ-ಚಂದ್ರ-ಯಮ-ಶತರೂಪಾದೇವಿ | 2 |
| 13. | ವರುಣದೇವ | 3/8 |
| 14. | ನಾರದಮಹರ್ಷಿ | ಕಿಂಚಿದವರ |
| 15. | ಅಗ್ನಿದೇವ-ಭೃಗುಋಷಿ-ಪ್ರಸೂತಿದೇವಿ | 1/8 |
| 16. | ಮರೀಚಿ-ಅತ್ರಿ-ಆಂಗಿರಸ-ಪುಲಸ್ತ್ಯ-ಪುಲಹ-ಕ್ರತು- ವಸಿಷ್ಠ-ವೈವಸ್ವತಮನು-ವಿಶ್ವಾಮಿತ್ರ | ಕಿಂಚಿದವರರು |
| 17. | ಮಿತ್ರನಾಮಕಸೂರ್ಯ-ನಿಋ್ಋತಿ-ಪ್ರಾವಹಿ-ತಾರಾದೇವಿ | '' |
| 18. | ವಿಷ್ವಕ್ಸೇನ-ಗಣಪತಿ-ಅಶ್ವಿನಿದೇವತೆಗಳು-ಕುಬೇರ-85 ಜನ ಶೇಷಶತಸ್ಥರು | '' |

| | | |
|---|---|---|
| 19. | ಕರ್ಮಜ ದೇವತೆಗಳು | " |
| 20. | ಪರ್ಜನ್ಯ-ಶ್ಯಾಮಲಾ-ಗಂಗಾ-ಸಂಜ್ಞಾ-ರೋಹಿಣಿ (ಅನಿರುದ್ಧಪತ್ನಿ)-ಉಷಾದೇವಿ | " |
| 21. | ಕೂರ್ಮಾದಿ ಅನಾಖ್ಯಾತ ದೇವತೆಗಳು | " |
| 22. | ಸ್ವಾಹಾದೇವಿ | " |
| 23. | ಬುಧದೇವ | " |
| 24. | (ದೇವಕಿದೇವಿ-ಯಶೋದಾದೇವಿ)-ನಾಮಾತ್ಮಿಕಾ-ಉಷಾದೇವಿ | " |
| 25. | ಶನಿದೇವ | " |
| 26. | ಪುಷ್ಕರದೇವ ಕರ್ಮಾಭಿಮಾನಿ | " |
| 27. | ಆಜಾನಜದೇವತೆಗಳು | ಕರ್ಮಜರಿಗಿಂತ ಶತಾಧಮರು |
| 28. | ಋಷಿಗಳು | ಆಜಾನಜರಿಗಿಂತ ಶತಾಧಮರು |
| 29. | ಚಿರಪಿತೃಗಳು | ಋಷಿಗಳಿಗಿಂತ ಶತಾಧಮರು |
| 30. | ದೇವಗಂಧರ್ವರು | ಚಿರಪಿತೃಗಳಿಗಿಂತ ಶತಾಧಮರು |
| 31. | ಮನುಷ್ಯಗಂಧರ್ವರು | ದೇವಗಂಧರ್ವರಿಗಿಂತ ಶತಾಧಮರು |
| 32. | ಮನುಷ್ಯರಾಜರು | ಮನುಷ್ಯಗಂಧರ್ವರಿಗಿಂತ ಶತಾಧಮರು |
| 33. | ಮಾನುಷೋತ್ತಮರು | ಮನುಷ್ಯರಾಜರಿಗಿಂತ ಶತಾಧಮರು |

## ತಾರತಮ್ಯ ಗ್ರಂಥಗಳ ವಿವರ

ತಾರತಮ್ಯ ಪ್ರಬಂಧಗಳನ್ನು ಪ್ರಾಯಃ ಕಾಲಕ್ಕೆ ಅನುಗುಣವಾಗಿ ಇಲ್ಲಿ ಜೋಡಿಸಲಾಗಿದೆ. ಕೃತಿಕಾರರ ಬಗ್ಗೆ ಗೊತ್ತಿದ್ದ ಅಲ್ಪ ಮಾಹಿತಿ ಕೂಡ ಮುಂದೆ ನೀಡಲಾಗಿದೆ.

1. ಸರ್ವಮೂಲಗ್ರಂಥಗಳಲ್ಲಿ ಬಂದ ತಾರತಮ್ಯಕ್ಕೆ ಸಂಬಂಧಿಸಿದ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಮಾತುಗಳನ್ನು ಪ್ರಮಾಣ ವಚನಗಳನ್ನು ಒಂದೆಡೆ ಸಂಗ್ರಹಿಸಲಾಗಿದೆ. ಈ ಮಾಲೆಯಲ್ಲಿ ಅದು ಮೊದಲ ಪುಷ್ಪ.
2. ಎರಡನೆಯದಾಗಿ ಶ್ರೀಮಟ್ಟೀಕಾಕೃತ್ಪಾದರು ಶ್ರೀಮನ್ನ್ಯಾಯಸುಧೆಯಲ್ಲಿ ಮಾಡಿದ ವ್ಯಾಖ್ಯಾನವನ್ನು ಕೊಡಲಾಗಿದೆ.
3. ಮೂರನೆಯದಾಗಿ ಕಲ್ಯಾಣಿದೇವಿಯ ರಚನೆಯೆಂದು ನಂಬಲಾದ ತಾರತಮ್ಯ ಪಂಚ ಶ್ಲೋಕಿಯನ್ನು ಜೋಡಿಸಲಾಗಿದೆ. ಇದು ಕಲ್ಯಾಣೀದೇವಿಯದ್ದು ಎಂಬ ಬಗ್ಗೆ ನಿಖರ ಆಧಾರ ದೊರಕಿಲ್ಲ. ಬಾಧಕ ಕಾಣುವ ತನಕ ಐತಿಹ್ಯವೂ ಪ್ರಮಾಣವಾಗಬಲ್ಲದಲ್ಲವೆ?
4. ಶ್ರೀರಘೂತ್ತಮತೀರ್ಥರು (1557-96) ರಚಿಸಿದ 'ತಾರತಮ್ಯ ಸಂಗ್ರಹ' ಇಲ್ಲಿ ಜೋಡಿಸಿದ ನಾಲ್ಕನೆಯ ಅಮೂಲ್ಯ ಕೃತಿಯಾಗಿದೆ. ಮಾಧ್ವವಾಙ್ಮಯದಲ್ಲಿ ಲೆಕ್ಕವಿಲ್ಲದಷ್ಟು ಶ್ರೀಮಂತ ಟಿಪ್ಪಣಿಗಳು ಇವರ ಮೂಲಕ ಮತ್ತು ಇವರ ಶಿಷ್ಯಪ್ರಶಿಷ್ಯರ ಮೂಲಕ ಹರಿದು

ಬಂದಿವೆ. ಪಂಚಭಾವಬೋಧಕಾರರೆಂದೇ ಪ್ರಸಿದ್ಧರಾದ ಈ ಮಹಾನುಭಾವರು ಇಲ್ಲಿ ಕಕ್ಷಾತಾರತಮ್ಯವನ್ನು ತುಂಬ ಹೃದಯಂಗಮವಾಗಿ ನಿರೂಪಿಸಿದ್ದಾರೆ.

5. ಇಲ್ಲಿ ಜೋಡಿಸಲಾದ ಐದನೆಯ ಕೃತಿ ಶ್ರೀವ್ಯಾಸತೀರ್ಥರ ಪ್ರಶಿಷ್ಯರಾದ ವಿಟ್ಠಲಾಚಾರ್ಯರಿಂದ ರಚಿತವಾದ 'ತಾರತಮ್ಯ ಸದ್ರತ್ನಮಾಲಾ'. ಈ ಕೃತಿಯ ಆರಂಭದಲ್ಲೇ ಕೃತಿಕಾರರು ವಿಷ್ಣು ಮೊದಲಾದ ದೇವತೆಗಳ ಅಂಶ- ಅವತಾರಗಳ ವಿವರ ನೀಡುವೆ ಎಂದಿದ್ದಾರೆ-

'ನತ್ವಾ ನಾರಾಯಣಂ ವಿಷ್ಣೋರಾವೇಶಂ ಚ ದಿವೌಕಸಾಮ್ ।
ಅವತಾರಂ ತಾರತಮ್ಯಂ ದರ್ಶಯಿಷ್ಯೇಽನ್ಯತಃ ಸ್ಥಿತಮ್ ॥'

ಬೃಹದಾರಣ್ಯಕ ಭಾಷ್ಯದಲ್ಲಿ ಶ್ರೀಮದಾಚಾರ್ಯರು ಹೇಳಿದ ಶ್ರೀಹರಿಯ ಮತ್ತು ಇತರ ದೇವತೆಗಳ ಅಂಶಾವತಾರ ವಿವರವನ್ನು ಇಲ್ಲಿ ಸುಂದರವಾಗಿ ಸಂಗ್ರಹಿಸಿದ್ದಾರೆ. ದೇವತೆಗಳ ತಾರತಮ್ಯ ವಿವರವನ್ನು ವರ್ಣಿಸುವಾಗ ಅಂಶಾವತಾರ ವಿವರವನ್ನು ನೀಡಿದ್ದಾರೆ. ನನ್ನ ಉಪೋದ್ಘಾತದಲ್ಲಿ ವಿಶೇಷವಾಗಿ ಈ ಅಂಶವನ್ನು ಬಳಸಿಕೊಂಡಿದ್ದೇನೆ.

6. 'ತಾರತಮ್ಯಸದ್ರತ್ನಮಾಲಾದೀಪಿಕಾ' ಇಲ್ಲಿನ ಆರನೆಯ ಕೃತಿ. ಇದು ಮೇಲಿನ ಛಂದೋಬದ್ಧವಾದ ತಮ್ಮ ಕೃತಿಗೆ ವಿಟ್ಠಲಾಚಾರ್ಯರೇ ಮಾಡಿದ ವ್ಯಾಖ್ಯಾನವಾಗಿದೆ.

7. 'ತಾರತಮ್ಯ ಪಾರಿಜಾತಃ' ಎಂಬ ಕೃತಿ ಶ್ರೀಮುಷ್ಣನರಸಿಂಹಾಚಾರ್ಯರ ಮಗನಾದ ಅನಂತಾಚಾರ್ಯರ ಕೃತಿ. ಇವರು ಸುಧಾ ಮತ್ತು ತತ್ತ್ವಸಂಖ್ಯಾನ ತಂತ್ರಸಾರಸಂಗ್ರಹಗಳಿಗೆ ವ್ಯಾಖ್ಯಾನ ರಚಿಸಿದ್ದಾರೆ. ಶ್ರೀಮುಷ್ಣದಲ್ಲಿದ್ದು ಬಿಡಿ ಸನ್ಯಾಸಿಗಳಿಗೂ, ಪೀಠಾಧೀಶರಿಗೂ ನೂರಾರು ಗೃಹಸ್ಥರಿಗೂ ಪಾಠ ಹೇಳಿದ ಮಹಾನುಭಾವರು- ಶ್ರೀಮುಷ್ಣ ನರಸಿಂಹಾಚಾರ್ಯರು. ಶ್ರೀಮುಷ್ಣ ಕ್ಷೇತ್ರದಲ್ಲಿ ಶ್ರೀವರಾಹ ದೇವರ ದೇಗುಲದ ವಿಶೇಷಮರ್ಯಾದೆ ಈ ಪರಂಪರೆಗೆ ಮೊನ್ನೆ ಮೊನ್ನೆಯ ತನಕ ಇದ್ದಿತೆಂದು ತಿಳಿದು ಬರುತ್ತದೆ. ಈ ವಂಶದವರನ್ನು 'ಆರ್ಯಾಚಾರ್ಯ'ರೆಂದೂ ಗೌರವಿಸುತ್ತಾರೆ. ತಾಮ್ರಪರ್ಣಿ ವಂಶದ ಮೂಲ ಪುರುಷರಾದ ಶ್ರೀನಾರಾಯಣಾಚಾರ್ಯರು ಶ್ರೀಮುಷ್ಣನರಸಿಂಹಾಚಾರ್ಯರ ಶಿಷ್ಯರು. ಇವರ ಬಗ್ಗೆ ರಚಿತವಾದ 'ಸಚ್ಛಾಸ್ತ್ರ ಶ್ರವಣಭೂಷಣ'ವೆಂಬ ಗ್ರಂಥದಲ್ಲಿ ಈ ಮಹನೀಯರು ಶ್ರೀಚಂದ್ರಿಕಾಚಾರ್ಯರು- ಶ್ರೀವಿಜಯೀಂದ್ರ ತೀರ್ಥರು- ಶ್ರೀವಾದಿರಾಜತೀರ್ಥರು ಶ್ರೀವೇದವ್ಯಾಸತೀರ್ಥರು ಶ್ರೀಯಾದವಾರ್ಯರಿಂದ ಸಮ್ಮಾನಿತರಾಗಿದ್ದರೆಂದು ತಿಳಿದು ಬರುವುದು. ಅನಂತಾಚಾರ್ಯರು ತಮ್ಮ ತಂದೆಯವರ ಮಹಿಮೆಯನ್ನು ಹೀಗೆ ಕೊಂಡಾಡಿದ್ದಾರೆ-

ಅಷ್ಟೌ ಹಿ ತೌಳವಾಃ ಕೃಷ್ಣಚರಣಾಂಭೋರುಹಾರ್ಚಕಾಃ।
ಶ್ರೀಪಾದಾಃ ರಘುನಾಥಸ್ಯ ತಥಾಽನ್ಯೇ ಚರಣಾರ್ಚಕಾಃ ।

ಅನ್ಯೇ ಚ ಬಹುದೇಶಸ್ಥಾಃ ಮಧ್ವಶಾಸ್ತ್ರಂ ಹಿ ಯನ್ಮುಖಾತ್
ಶುಶ್ರುವುಸ್ತಂ ಸದಾಽತ್ರೇಯಗೋತ್ರಂ ಋಗ್ವೇದಿನಂ ಭಜೇ॥

ಇಪ್ಪತ್ತು ಬಾರಿಗೆ ಶ್ರೀಮನ್ನ್ಯಾಯಸುಧಾಮಂಗಲೋತ್ಸವ ಮಾಡಿದ್ದರೆಂದು ಇವರನ್ನು ಅನಂತಾಚಾರ್ಯರು ನುತಿಸಿದ್ದಾರೆ.

8. ಶ್ರೀಶ್ರೀನಿವಾಸತೀರ್ಥರು ದ್ವೈತವಾಙ್ಮಯದಲ್ಲಿ ಸುಪ್ರಸಿದ್ಧ ಟಿಪ್ಪಣೀಕಾರರು. ಇವರ ನ್ಯಾಯಾಮೃತವ್ಯಾಖ್ಯಾನ- ಋಗ್ಭಾಷ್ಯ ಟೀಕಾ ವ್ಯಾಖ್ಯಾನ- ದಶಪ್ರಕರಣಟೀಕಾ ವ್ಯಾಖ್ಯಾನಗಳು ಪ್ರಾಜ್ಞ- ಅಜ್ಞಜನಾನುಗ್ರಾಹಕವಾಗಿವೆ. 9 ಶ್ಲೋಕಗಳಲ್ಲಿ ಕಕ್ಷ್ಯಾ ತಾರತಮ್ಯವನ್ನು 'ತಾರತಮ್ಯಮುಕ್ತಾಮಾಲಾ' ಎಂಬ ಕೃತಿಯ ಮೂಲಕ ಸರಳವಾಗಿ ನಿರೂಪಿಸಿದ್ದಾರೆ. ಇದು ಇಲ್ಲಿನ ಎಂಟನೆಯ ಕೃತಿ.

9. ತಾರತಮ್ಯನವಶ್ಲೋಕೀ ಮುಕ್ತಾಮಾಲಾದೀಪಿಕಾ ಇಲ್ಲಿ ಸಂಯೋಜಿಸಿದ ಒಂಬತ್ತನೆಯ ಕೃತಿ. ಇದನ್ನು ರಚಿಸಿದವರು ಶ್ರೀನಿವಾಸತೀರ್ಥರ ಚಿರಂಜೀವಿಗಳಾದ ವೆಂಕಟಪತ್ಯಾಚಾರ್ಯರು. ಇವರು ತಂತ್ರಸಾರ ಸಂಗ್ರಹಕ್ಕೆ ಅಪೂರ್ವ ವ್ಯಾಖ್ಯೆ ರಚಿಸಿದ್ದಾರೆ. ಈ ತಾರತಮ್ಯಸ್ತೋತ್ರ ವ್ಯಾಖ್ಯಾನವು ಸರ್ವಮೂಲ ಗ್ರಂಥಗಳಲ್ಲಿನ ತಾರತಮ್ಯಕ್ಕೆ ಸಂಬಂಧಿಸಿದ ಆಚಾರ್ಯರ ವಚನಗಳಲ್ಲಿ ಪರಸ್ಪರ ಏಕವಾಕ್ಯತೆಯನ್ನು ತಿಳಿಸುತ್ತಿದ್ದು ಗಾತ್ರದಿಂದ ಚಿಕ್ಕದಾದರೂ ಚೊಕ್ಕವಾಗಿದೆ. ಕೆಲವು ಸ್ಥಳಗಳಲ್ಲಿ ಸೂಕ್ಷ್ಮ ವಿಮರ್ಶೆ ಮಾಡಿದ್ದು ಬಹಳ ಉಪಯುಕ್ತವಾದ ಟಿಪ್ಪಣಿ ಇದಾಗಿದೆ.

10. 'ತಾರತಮ್ಯಸಂಗ್ರಹ'ವೆಂಬ ಕೃತಿಯ ಕರ್ತೃ ವೆಂಕಟಪತಿಗಳು. ಇದು ಇಲ್ಲಿ ಸಂಯೋಜಿಸಿದ ಹತ್ತನೆಯ ಕೃತಿ. ಇವರು ಶ್ರೀನಿವಾಸತೀರ್ಥರ ಶಿಷ್ಯರಾಗಿದ್ದಾರೆ. ಅನುಷ್ಟುಪ್ ಛಂದೋಬದ್ಧವಾದ ಈ ಕೃತಿಯಲ್ಲಿ ಶ್ರೀನಿವಾಸತೀರ್ಥರು ಪಾಠ ಹೇಳಿದ ಕ್ರಮದಲ್ಲಿ ವಿಷಯವನು ನಿರೂಪಿಸಿದ್ದಾರೆ.

11. ಶ್ರೀರಾಘವೇಂದ್ರ ಗುರುಸಾರ್ವಭೌಮರ ಶಿಷ್ಯರಾದ ಆರ್ಯನಾರಾಯಣಾಚಾರ್ಯರ ಮಗನಾದ ಕೃಷ್ಣಾಚಾರ್ಯರ 'ತಾರತಮ್ಯ ಪ್ರಬಂಧ' ಇಲ್ಲಿ ದಾಖಲಿಸಿದ ಹನ್ನೊಂದನೆಯ ಕೃತಿಯಾಗಿದೆ. ಒಂದೇ ತಾಳಪತ್ರವನ್ನು ಆಧರಿಸಿ ಶೋಧಿಸಿದ ಈ ಕೃತಿಯಲ್ಲಿ ಲೇಖಕ ಪ್ರಮಾದಗಳು ಭೂಯಿಷ್ಠವಾಗಿವೆ. ಮನುಷ್ಯೋತ್ತಮರಿಗಿಂತ ಕೆಳಗಿನ ಕಕ್ಷೆಯಲ್ಲಿ ಬರುವ ಹೋಮ್ಯ ಪ್ರಾಣಿಗಳು ವೃಕ್ಷ- ಲತಾ- ಗುಲ್ಮಗಳಲ್ಲಿ ತಾರತಮ್ಯವನ್ನು ಇವರು ವಿವರಿಸಿದ್ದಾರೆ. ಇದು ಈ ಕೃತಿಯ ಅಪೂರ್ವತೆ.

12. ಇಲ್ಲಿ ಸಂಯೋಜಿತ ಹನ್ನೆರಡನೆಯ ಕೃತಿ 'ತಾರತಮ್ಯ ಕೌಸ್ತುಭ'. ಇದರ ರಚಯಿತೃ- ಛಲಾರಿನರಸಿಂಹಾಚಾರ್ಯ. ಇವರು ಶ್ರೀಮದುತ್ತರಾದಿಮಠದ ಶ್ರೀವಿದ್ಯಾಧೀಶತೀರ್ಥರ

ಶಿಷ್ಯರು. ತಂತ್ರಸಾರಸಂಗ್ರಹ- ಭಾಗವತತಾತ್ಪರ್ಯ ಮೊದಲಾದ ಕೃತಿಗಳಿಗೆ ವ್ಯಾಖ್ಯಾನರಚಿಸಿದವರು. ತಮ್ಮ ಈ ಕೃತಿಯಲ್ಲಿ ಮನುಷ್ಯೋತ್ತಮ ಕಕ್ಷೆಯಿಂದ ಕೆಳಗಿರುವ ಕಕ್ಷೆಗಳನ್ನು ವಿಷ್ಣುರಹಸ್ಯ ಮತ್ತು ಪುರಾಣಗಳಲ್ಲಿ ಹೇಳಿದ ರೀತಿಯಿಂದ ನಿರೂಪಿಸಿದ್ದಾರೆ.

13. ಶ್ರೀಮದುತ್ತರಾದಿ ಮಠದ ಶ್ರೀ ಸತ್ಯಪ್ರತತೀರ್ಥರು ( 1650- 1700) ರಚಿಸಿದ ಕೃತಿ- ತಾರತಮ್ಯಸಂಗ್ರಹ. ಇದು ಈ ಮಾಲೆಯಲ್ಲಿ ಹದಿಮೂರನೆಯ ಪುಷ್ಪವಾಗಿದೆ. ಗದ್ಯಮಯವಾದ ಈ ಕೃತಿಯಲ್ಲಿ ಪ್ರತಿಯೊಂದು ಕಕ್ಷೆಯಲ್ಲಿ ಬರುವ ದೇವತೆಗಳು ಮತ್ತು ಗುಣತಾರತಮ್ಯವನ್ನು ಸರಳವಾಗಿ ನಿರೂಪಿಸಲಾಗಿದೆ.

14. ಪ್ರಹ್ಲಾದಕೃಷ್ಣಾಚಾರ್ಯ ವಿರಚಿತ ತಾರತಮ್ಯ ಪಂಚಶ್ಲೋಕೀ ವಿವೃತಿ ಈ ಕೃತಿಮಾಲೆಯಲ್ಲಿ ಹದಿನಾಲ್ಕನೆಯ ಕುಸುಮವಾಗಿದೆ. ಈ ಕೃತಿಕಾರರು ಶ್ರೀಮದ್ ಯಾದವಾರ್ಯರ ಶಿಷ್ಯರಾದ ತಿರುಮಲಾಚಾರ್ಯಸೂರಿಗಳ ಮಗ. ತಾರತಮ್ಯ ಸ್ವರೂಪ ವಿಮರ್ಶೆಗೆ ಸಂಬಂಧಿಸಿದಂತೆ ಸರ್ವಮೂಲ- ಟೀಕಾ ಗ್ರಂಥದ ವ್ಯಾಪಕ ಅಧ್ಯಯನದ - ವಿಮರ್ಶೆ ಈ ಕೃತಿಯಲ್ಲಿ ಅಡಗಿದೆ. ತಾರತಮ್ಯ ವಿವರಣೆಯಲ್ಲಿ ಆ ತನಕ ಬಂದ ಅನೇಕ ಕೃತಿಗಳನ್ನು ವಿಮರ್ಶಿಸಿ ಸರ್ವಮೂಲ ಶ್ರೀಮನ್ನ್ಯಾಯಸುಧಾಗ್ರಂಥಗಳಿಗೆ ಸಮ್ಮತವಾದ ಆಶಯವನ್ನು ಇಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿದೆ. ಪ್ರಾಯಃ ತಾರತಮ್ಯಸ್ವರೂಪಕ್ಕೆ ಸಂಬಂಧಿಸಿದ ಇಷ್ಟು ಸರ್ವಗ್ರಾಹಿ ಕೃತಿ ಈ ತನಕ ಬಂದಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ನನ್ನ ಉಪೋದ್ಘಾತದಲ್ಲಿ ಈ ಕೃತಿಯನ್ನು ಮುಖ್ಯವಾಗಿ ಆಧರಿಸಿ ಆಯಾದೇವತೆಗಳ ಗುಣತಾರತಮ್ಯ ಇತ್ಯಾದಿಗಳನ್ನು ನಿರೂಪಿಸಿದ್ದೇನೆ. ಪ್ರಾತಃ ಸ್ಮರಣೀಯ ಶ್ರೀಸತ್ಯಧ್ಯಾನತೀರ್ಥಶ್ರೀಪಾದರು ಅವರ ಯತಿ ಶಿಷ್ಯಪ್ರವರರಾದ ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರಿಗೆ ಅತ್ಯಂತ ಸಮ್ಮತವಾದ ಕೃತಿ ಇದಾಗಿದೆ.

15+ 16, ಹದಿನೈದನೆಯ ಮತ್ತು ಹದಿನಾರನೆಯ ಕುಸುಮವಾಗಿ ಈ ಮಾಲಿಕೆಯಲ್ಲಿ ಸೇರಿದ ಕೃತಿಗಳು ತಾರತಮ್ಯಸಾರಸಂಗ್ರಹದೀಪಿಕಾ ಮತ್ತು ಅದರ ವ್ಯಾಖ್ಯೆ.

ಇವುಗಳ ಕರ್ತೃ ಕರವೀರಪುರ ಮಧ್ವಾಚಾರ್ಯ. 74 ಅನುಷ್ಟುಪ್ ಶ್ಲೋಕಗಳನ್ನು ಒಳಗೊಂಡ ಈ ಕೃತಿಯಲ್ಲಿ ಆರಂಭದಲ್ಲಿ ಪೂರ್ಣಪ್ರಜ್ಞರು - ಯಾದವಾರ್ಯರು ಶ್ರೀನಿವಾಸತೀರ್ಥರು- ಕೇಶವಾಚಾರ್ಯರು- ವಿದ್ಯಾಗುರುಗಳಾದ ವ್ಯಾಸಾಚಾರ್ಯರನ್ನು ನಮಿಸಿದ್ದಾರೆ. ಗುರುರಾಜನೆಂಬ ಶಿಷ್ಯನಿಂದ ಪ್ರಾರ್ಥಿತರಾಗಿ ಈ ಕೃತಿರಚಿಸಿದ್ದಾರೆ. ಇವರೇ ರಚಿಸಿದ ಸಂಗ್ರಹದೀಪಿಕಾ ಕೃತಿಗೆ ವಿಸ್ತಾರವಾಗಿ ಪ್ರಾಯಃ ಪದ್ಯಮಯವಾದ ವ್ಯಾಖ್ಯಾನವನ್ನು ರಚಿಸಿದ್ದಾರೆ. 64 ಕಕ್ಷೆಗಳನ್ನು ಮಾಡಿ ಗುಣತಾರತಮ್ಯವನ್ನು ನಿರೂಪಿಸಿದ್ದಾರೆ. ಮನುಷ್ಯೋತ್ತಮರಲ್ಲಿ, ಪಶುಜೀವರಲ್ಲಿ ವೃಕ್ಷಜೀವರಲ್ಲಿರುವ ನೈಸರ್ಗಿಕ ತಾರತಮ್ಯವು ಇಲ್ಲಿ ವಿಸ್ತರವಾಗಿ ನಿರೂಪಿತವಾಗಿದೆ. 36ನೇ ಕಕ್ಷ್ಯೆಯಿಂದ ಪರಮಹಂಸರು- ಹಂಸರು-

ಬಹೂದರರು- ಕುಟೀಚಕರು- ಫೇನಪರು- ಔದಂಬರರು- ವಾಲಖಿಲ್ಯರು- ವೈಖಾನಸರು- ಶಿಲೋಂಛರು- ಶಾಲೀನರು- ಅಸಂಚಯರು- ವಾರ್ತಾಪರರು- ಬಹ್ಮಚಾರಿವರ್ಗಕ್ಕೆ ಸೇರಿದ ಬೃಹತ್ತರರು- ಬ್ರಾಹ್ಮರು- ಪ್ರಾಜಾಪತ್ಯರು- ಸಾವಿತ್ರರು- ಕ್ಷತ್ರಿಯರು- ವೈಶ್ಯರು- ಶೂದ್ರರು- ಪ್ರತಿಲೋಮರು- ಅಂತ್ಯಜರು- ಪಶುಗಳಲ್ಲಿ ಗಜಗಳು- ಅಶ್ವಗಳು, ಮೃಗಗಳು- ವೃಕ್ಷಗಳು- ಲತೆಗಳು - ಗುಲ್ಮಗಳು- ಓಷಧಿಗಳು ಕ್ರಮವಾಗಿ ಗುಣತಾರತಮ್ಯ ಹೊಂದಿರುವವೆಂದು ವಿಷ್ಣುಪುರಾಣ ಮತ್ತು ಭಾಗವತ ಗೀತಾತಾತ್ಪರ್ಯ ಮೊದಲಾದ ಗ್ರಂಥಗಳ ಆಧಾರದಿಂದ ನಿರೂಪಿಸಿದ್ದಾರೆ. ಶ್ರೀಜಗನ್ನಾಥದಾಸರ ಹರಿಕಥಾಮೃತಸಾರದಲ್ಲಿ ತಾರತಮ್ಯ ಸಂಧಿಗಳಲ್ಲಿ ಈ ವಿವರ ಬಂದಿದೆ. ವಿಸ್ತಾರವಾದ ಜೀವತಾರತಮ್ಯ ನಿರೂಪಣೆ ಮೂಲಗ್ರಂಥಗಳ ಆಧಾರದಿಂದ ಶ್ರೀಜಗನ್ನಾಥದಾಸರ ಕೃತಿಗಳಿಗಿಂತ ಮೊದಲೇ ರಚಿತವಾಗಿರುವುದು ಗಮನಾರ್ಹ.

17. ತಾಮ್ರಪರ್ಣೀವಂಶದ ವಿಟ್ಠಲಾಚಾರ್ಯರ ಮಗನಾದ ಆನಂದ ತೀರ್ಥಾಚಾರ್ಯರು ರಚಿಸಿದ 'ತಾರತಮ್ಯಸ್ತುತಿ' ಹದಿನೇಳನೆಯದಾಗಿದೆ . 18ನೇಶತಕದ ಇವರು 62 ಶ್ಲೋಕಗಳಲ್ಲಿ ದೇವತಾತಾರತಮ್ಯವನ್ನು ಸ್ಫುಟವಾಗಿ ವಿವರಿಸಿದ್ದಾರೆ.

18. ಹದಿನೆಂಟನೆಯ ಇಲ್ಲಿ ಸಂಯೋಜಿತ ಕೃತಿ 'ತಾರತಮ್ಯಸಂಗ್ರಹ' ನರಸಿಂಹಾಚಾರ್ಯರ ರಚನೆ. 41 ಶ್ಲೋಕಗಳಲ್ಲಿ ಇವರು ತಾರತಮ್ಯ ವಿವರವನ್ನು ತಿಳಿಸಿದ್ದಾರೆ. ಇವರ ಕೃತಿಯಲ್ಲಿ ದೇಶ- ಕಾಲ- ಗುರುಗಳ ವಿವರ ತಿಳಿಯುವುದಿಲ್ಲ.

19. ಹಂತೊಬತ್ತನೆಯ ಕೃತಿ ತಾರತಮ್ಯಮಣಿಮಾಲಾ ದೇವಗಿರಿ ವಿಟ್ಠಲಾಚಾರ್ಯ ಕೃತವಾದುದು. 21 ಶ್ಲೋಕಗಳನ್ನು ಒಳಗೊಂಡ ಈ ಕೃತಿಯಲ್ಲಿ ತಾರತಮ್ಯವನ್ನು ಒಪ್ಪವಾಗಿ ವಿವರಿಸಿದ್ದಾರೆ. ಇವರ ದೇಶ- ಕಾಲಗಳ ಬಗ್ಗೆ ವಿವರ ಏನೂ ತಿಳಿದಿಲ್ಲ.

20. ಚಟ್ಟಿ ಆನಂದಾಚಾರ್ಯರ ರಚನೆಯಾದ ತಾರತಮ್ಯ ಸಂಗ್ರಹ ಇಲ್ಲಿ ಸಂಯೋಜಿಸಿದ 20ನೆ ಕೃತಿ. ಇವರು ಚಟ್ಟಿ ಜನಾರ್ದನಾಚಾರ್ಯರ ಮಗ. 50 ಶ್ಲೋಕಗಳನ್ನು ಒಳಗೊಂಡ ಈ ಕೃತಿಯಲ್ಲಿ ಸಕಲ ಶಾಸ್ತ್ರ ಸಾರವನ್ನು ನಿರೂಪಿಸಿದ್ದಾರೆ. ಇವರ ದೇಶ ಕಾಲ ಕೃತಿಗಳ ಬಗ್ಗೆ ಯಾವ ವಿವರ ದೊರಕಿಲ್ಲ.

21. ರಾಮಾಚಾರ್ಯಪ್ರಣೀತ ತಾರತಮ್ಯಸ್ತವನವು ಇಲ್ಲಿ 21ನೆಯ ಕೃತಿಯಾಗಿ ಜೋಡಿಸಲ್ಪಟ್ಟಿದೆ. 99 ಶ್ಲೋಕಗಳ ಈ ಕೃತಿಯಲ್ಲಿ ಕೃತಿಕಾರನ ದೇಶ- ಕಾಲ- ಇತರ ಕೃತಿಗಳ ಬಗ್ಗೆ ಏನೂ ವಿವರ ದೂರಕುವುದಿಲ್ಲ. ತಾರತಮ್ಯಸ್ವರೂಪವನ್ನು ಈ ಕೃತಿ ಸರಳವಾಗಿ ನಿರೂಪಿಸಿದೆ.

22. 8 ಶ್ಲೋಕಗಳ್ನು ಒಳಗೊಂಡ ತಾರತಮ್ಯಾಷ್ಟಕವು ಬಾಣಂದೂರು ಅಪ್ಪಣ್ಣಾಚಾರ್ಯರ ಮಗ ರಾಮಾಚಾರ್ಯರ ಕೃತಿ. ಶ್ರೀನಿವಾಸತೀರ್ಥರ ತಾರತಮ್ಯ ನವಶ್ಲೋಕೀ ಕೃತಿಯಂತೆ ಈ ಅಷ್ಟಕವೂ ದೇವತಾಗುಣ ತಾರತಮ್ಯವನ್ನು ನಿಖರವಾಗಿ ತಿಳಿಸುತ್ತದೆ.

23. ಗೂಢ ಕರ್ತೃಕವಾದ ದೇವ-ಪೂರ್ವದೇವತಾರತಮ್ಯ ಪ್ರಕಾಶವು ಇಲ್ಲಿ ಸಂಯೋಜಿತವಾದ 23ನೇ ಕೃತಿ. 71 ಕಕ್ಷೆಗಳನ್ನಾಗಿ ಮುಕ್ತಿಯೋಗ್ಯರನ್ನು ಇಲ್ಲಿ ವಿಂಗಡಿಸಿ ನಿರೂಪಿಸಿದ್ದಾರೆ.

24. ಮುದ್ಗಲಾನಂದತೀರ್ಥಕೃತ ತಾರತಮ್ಯಸಂಗ್ರಹವು ಎಂಟು ಶ್ಲೋಕಗಳಿಂದ ಕೂಡಿದ್ದು ತಾರತಮ್ಯ ಸ್ವರೂಪವನ್ನು ತಿಳಿಸುತ್ತದೆ. ಪ್ರಸನ್ನವೆಂಕಟದಾಸರಿಗೆ ದೀಕ್ಷೆ ನೀಡಿದ ಮುದ್ಗಲಾಚಾರ್ಯರು ಶ್ರೀಸತ್ಯಪೂರ್ಣತೀರ್ಥರ (1700) ಸಮಕಾಲೀನರೆಂದು ತಿಳಿದು ಬರುತ್ತದೆ. ಆ ಮುದ್ಗಲಾಚಾರ್ಯರ ಪರಂಪೆರೆಯಲ್ಲಿ ಇವರು ಬಂದವರೆನಿಸುತ್ತದೆ. ಹೆಚ್ಚಿನ ವಿವರ ತಿಳಿದಿಲ್ಲ.

25. ಪ್ರಜ್ಞಾಚಾರ್ಯರು ರಚಿಸಿದ ಗದ್ಯಮಯ ತಾರತಮ್ಯ ಸಂಗ್ರಹಕೃತಿ ಇಲ್ಲಿ ಸಂಯೋಜಿಸಲಾಗಿದೆ. ಈ ಕೃತಿಕಾರರ ವಿವರ ತಿಳಿದಿಲ್ಲ.

26. ಮಧ್ವಸಿದ್ಧಾಂತಸಾರ ಕೃತಿರಚಯಿತೃಗಳಾದ ಅನಂತಪದ್ಮನಾಭಾಚಾರ್ಯರ ಕೃತಿ ಇದಾಗಿದೆ ಇದನ್ನು 26ನೆಯ ಕುಸುಮವಾಗಿ ಇಲ್ಲಿ ಜೋಡಿಸಲಾಗಿದೆ. ವಾಕ್ಯಾರ್ಥವಿಮರ್ಶೆಯಿಂದ ಕೂಡಿದ ಈ ಕೃತಿ ವಿದ್ವಾಂಸರಿಗೆ ಮುದ ನೀಡುತ್ತದೆ.

27. ಮಹಾಭಾಷ್ಯ ರಘೂತ್ತಮಾಚಾರ್ಯರು ರಚಿಸಿದ ತಾರತಮ್ಯಸ್ತೋತ್ರವು ಎಂಟು ಶ್ಲೋಕಗಳನ್ನು ಒಳಗೊಂಡಿದೆ. ಇದೂ ಕೂಡ ಶ್ರೀನಿವಾಸತೀರ್ಥರ ಕೃತಿಯಂತೆ ದೇವತಾತಾರತಮ್ಯವನ್ನು ಸ್ಪಷ್ಟವಾಗಿ ನಿರೂಪಿಸುತ್ತದೆ. ಕೃತಿಕಾರರ ದೇಶ-ಕಾಲ-ಇತರ ಕೃತಿಗಳ ಬಗ್ಗೆ ಏನೂ ವಿಷಯ ದೂರಕಿಲ್ಲ.

28. ತಾರತಮ್ಯ ಪಂಚಶ್ಲೋಕೀ ಕೃತಿಗೆ ಸರಳವಾದ ಚಿಕ್ಕದಾದ ವ್ಯಾಖ್ಯಾನವನ್ನು ಕಟಾಹಕ್ಷೇತ್ರವಾಸಿ ಮ.ಮ. ಗೋಪಾಲಾಚಾರ್ಯರು ರಚಿಸಿದ್ದಾರೆ. ಇದನ್ನು 28 ನೆಯ ಕುಸುಮವಾಗಿ ಇಲ್ಲಿ ಜೋಡಿಸಲಾಗಿದೆ.

29. 19ನೆ ಶತಮಾನದ ಶ್ರೇಷ್ಠವಿದ್ವಾಂಸರಾಗಿದ್ದ ಯಲಿಮೇಲಿ ವಿಟ್ಠಲಾಚಾರ್ಯರು ರಚಿಸಿದ ಕೃತಿ ಕಕ್ಷಾ ತಾರತಮ್ಯಮ್, ಇದರಲ್ಲಿ ಗುಣತಾರತಮ್ಯ ನಿರೂಪಣೆಯ ಜೊತೆಗೆ ಪ್ರತಿಯೋರ್ವ ದೇವತೆಗೆ ನಮನವು ಸಮರ್ಪಿತವಾಗಿದೆ ಪ್ರಮೇಯದ ಜೊತೆ ನಮನವನ್ನು ಪಾರಾಯಣಮಾತ್ರದಿಂದ ಸಲ್ಲಿಸಿದಂತಾಗುವುದು.

30. ಗರುಡ ಪುರಾಣಾಂತರ್ಗವಾದ ದೈತ್ಯತಾರತಮ್ಯವನ್ನು ಇಲ್ಲಿ ನೀಡಲಾಗಿದೆ. ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದಲ್ಲಿನ ನಾಗರಿ ಹಸ್ತಪ್ರತಿಯಿಂದ ಇದರ ಶುದ್ಧಪಾಠ ನೀಡಲು ಪ್ರಯತ್ನಿಸಲಾಗಿದೆ. ದೇವತೆಗಳ ತಾರತಮ್ಯ ಜ್ಞಾನದಂತೆಯೇ ದಾನವರ ತಾರತಮ್ಯಜ್ಞಾನವೂ ಅತ್ಯಾವಶ್ಯಕ. ಅದನ್ನೂ ಇಲ್ಲಿ ನಿರೂಪಿಸಿದ್ದಾರೆ ವಿವರ ಉಪೋದ್ಘಾತದಲ್ಲಿದೆ.

31 + 32 ಕನ್ನಡ ಭಾಷೆಯಲ್ಲಿ ಶ್ರೀಜಗನ್ನಾಥದಾಸವರ್ಯರು ರಚಿಸಿದ ತಾರತಮ್ಯಕ್ಕೆ ಸಂಬಂಧಿಸಿದ ಎರಡು ಪ್ರತ್ಯೇಕ ಕೃತಿಗಳನ್ನು ಇಲ್ಲಿ ಸೆರೆ ಹಿಡಿಯಲಾಗಿದೆ. ಕನ್ನಡದಲ್ಲಿ ಈ ಶಾಸ್ತ್ರಜ್ಞರು ಹಿಂದೆ ತಿಳಿಸಿದ ಸಂಸ್ಕೃತ ಪ್ರಾಚೀನಗ್ರಂಥಗಳನ್ನು ಅವಲಂಬಿಸಿ ಸುಂದರವಾಗಿ ದೇವತಾತಾರತಮ್ಯ ಅಂಶಾವತಾರ ವಿವರವನ್ನು ನಿರೂಪಿಸಿದ್ದಾರೆ. ಶಾಸ್ತ್ರಸಾಗರವನ್ನು ನಿರ್ಮಥಿಸಿದ ಶ್ರೀಮಟ್ಟೀಕಾಕೃತ್ಪಾದರು ಶ್ರೀಮನ್ನ್ಯಾಯಸುಧೆಯನ್ನು ಕರುಣಿಸಿದಂತೆ, ಶ್ರೀ ಜಗನ್ನಾಥದಾಸರೂ ಶಾಸ್ತ್ರಸಾಗರವನ್ನು ನಿರ್ಮಥಿಸಿ ಅನುಗ್ರಹಿಸಿದ ಕೃತಿ ಶ್ರೀ ಹರಿಕಥಾಮೃತ ಸಾರ.

## ಮುದ್ರಿತವಾಗುತ್ತಿರುವ ತಾರತಮ್ಯಗ್ರಂಥಗಳ ಹಿನ್ನೆಲೆ

ಪಾತ್ರಃಸ್ಮರಣೀಯ ಗುರುಗಳಾದ ಶ್ರೀವಿದ್ಯಾಮಾನ್ಯತೀರ್ಥರು ಬೃಂದಾವನಸ್ಥರಾಗುವ ಒಂದು ವರ್ಷದ ಹಿಂದಿನ ಪ್ರಸಂಗವೊಂದನ್ನು ಉಲ್ಲೇಖಿಸಬಯಸುತ್ತೇನೆ. ಅವರಲ್ಲಿ ಶಾಸ್ತ್ರದ ವಿಷಯದಲ್ಲಿ ಸಂಶಯಪರಿಹರಿಸಿಕೊಳ್ಳಲು ತೊಡಗಿದಾಗ ಪ್ರಾಸಂಗಿಕವಾಗಿ ಕಕ್ಷ್ಯಾತಾರತಮ್ಯದ ವಿಷಯ ಪ್ರಸ್ತಾಪವಾಯಿತು. ಇಂದ್ರನ ಕಕ್ಷೆ ಯಾವುದು? ಎಂದು ಒಂದೆರಡು ಪ್ರಶ್ನೆ ಕೇಳಿದರು. ಅದರ ಬಗ್ಗೆ ನನಗೇನೂ ಗೊತ್ತಿರಲಿಲ್ಲ. ಹಿಂದೊಮ್ಮೆ ಭಾಗವತದ ವಿಷಯವೊಂದನ್ನು ಅವರ ಮುಂದೆ ಪ್ರವಚನ ಮಾಡಿದಾಗ ಆದೇಶಿಸಿದ್ದರು- 'ನಿನ್ನ ಪ್ರವಚನದಿಂದ ನನಗೊಂದು ಸಂಗತಿ ತಿಳಿಯಿತು. ನೀನು ಮಹಾಭಾರತತಾತ್ಪರ್ಯನಿರ್ಣಯವನ್ನು ಅಭ್ಯಾಸ ಮಾಡಿಲ್ಲ. ಅದರ ಕೊರತೆ ಪ್ರವಚನದಲ್ಲಿ ಗಮನಿಸಿದೆ. ಇನ್ನು ಮುಂದೆ ಯಾರಿಗಾದರೂ ಅದನ್ನು ಪಾಠಹೇಳು, ಆ ನಿಮಿತ್ತದಿಂದ ಇದನ್ನೂ ಅಧ್ಯಯನಮಾಡಿದಂತಾಗುವುದು.'

ಹೀಗೆ ಅನೇಕ ಪ್ರಸಂಗಗಳಲ್ಲಿ ವಾತ್ಸಲ್ಯದಿಂದ ಅಭ್ಯಾಸಕ್ಕೆ ಪ್ರೇರಣೆ ನೀಡಿ ಅನುಗ್ರಹಿಸಿದ್ದರು. ಕಕ್ಷಾ ತಾರತಮ್ಯಕ್ಕೆ ಸಂಬಂಧಿಸಿದಂತೆ ತಾವು ಉತ್ತರಾದಿಮಠದಲ್ಲಿ ಅಧ್ಯಯನ ಮಾಡುವ ಕಾಲದಲ್ಲಿ ಶ್ರೀಸತ್ಯಧ್ಯಾನತೀರ್ಥರಿಂದ ಪ್ರಶಂಸೆಗೆ ಪಾತ್ರವಾದ ವಿಸ್ತಾರ ಗ್ರಂಥವನ್ನೊಂದು ನೋಡಿದ್ದೆ. 5-6 ಶ್ಲೋಕಗಳಿಗೆ ನೂರಾರು ಪುಟಗಳಷ್ಟು ವಿಸ್ತೃತವಾದ ಸರ್ವಮೂಲ-ಸುಧಾದಿ ಗ್ರಂಥಗಳ ಸಾರವನ್ನು ಗ್ರಹಿಸಿದ ಗ್ರಂಥ ಅದಾಗಿತ್ತು. ಅಂತಹ ಗ್ರಂಥಗಳ ಮುದ್ರಣವಾಗಬೇಕು ಎಂದು ಆದೇಶವಿತ್ತರು. ಕಕ್ಷಾತಾರತಮ್ಯದ ಗಾಢವಾದ ಅಜ್ಞಾನ ಒಪ್ಪಿಕೊಂಡ ನಾನು ಆ ಗ್ರಂಥವು ಯಾವುದಿರಬಹುದೆಂದು ವಿಮರ್ಶಿಸಿ, ನಮ್ಮ ಮೈಸೂರು ವಿಶ್ವವಿದ್ಯಾಲಯದ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿರುವ ಕಾಗದದ ಅಪ್ರಕಾಶಿತ ಕೆಲವು ಹಸ್ತಪ್ರತಿಗಳನ್ನು ತಂದು ತೋರಿಸಿದೆ. ಅವರು ತಾಳ್ಮೆಯಿಂದ ಅವುಗಳನ್ನು ಪರಿಶೀಲಿಸಿ ಇದೇ ನಾನು ನೋಡಿದ ಗ್ರಂಥವೆಂದು ಒಂದನ್ನು ತೆಗೆದುಕೊಟ್ಟರು. ಅದು 'ತಾರತಮ್ಯ ಪಂಚಶ್ಲೋಕಿ' ಗ್ರಂಥಕ್ಕೆ ಯಾದವಾರ್ಯರ ಪ್ರಶಿಷ್ಯರಾದ ಪ್ರಹ್ಲಾದಕೃಷ್ಣಾಚಾರ್ಯರು ರಚಿಸಿದ ವ್ಯಾಖ್ಯಾನವಾಗಿತ್ತು. ಅದರ ಪ್ರತಿ ತೆಗೆದು ಅರ್ಥ ಮಾಡಿಕೊಂಡು ಗ್ರಂಥಸಂಪಾದನಾ ಕಾರ್ಯದಲ್ಲಿ ತೊಡಗಿದೆ. ಅಮೆಯ ವೇಗದಲ್ಲಿ ನಡೆಯುತ್ತ ಬಂದ ಈ ಕಾರ್ಯದಲ್ಲಿ ನಾನು ಅಪ್ರಕಾಶಿತವಾದ

